# ಮುನ್ನುಡಿ

ಇದು 'ಕವನ ಸಂಕುಲ'. ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ ಲೆಕ್ಕಾಧಿಕಾರಿಗಳ ಸಂಘದ ಆಶ್ರಯದಲ್ಲಿ ಕಳೆದ ಆರೆಂಟು ವರ್ಷಗಳಿಂದ ಅನೂಚಾನವಾಗಿ, ನಮ್ಮ ಲೆಕ್ಕಾಧಿಕಾರಿಗಳ ಸಂಘದ ಬೆಳ್ಳಿ ಭವನದಲ್ಲಿ, ನಡೆಯುತ್ತಿರುವ ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ಪ್ರೀತಿಯಿಂದ ಬರುತ್ತಿರುವ ಸಂಖ್ಯೆ ಎಂದೂ ಕಡಿಮೆಯಾಗಿಲ್ಲ. ಸದಸ್ಯರಲ್ಲಿ ಕವಿಮನದವರು, ಕವಿಭಾವದವರು, ಕವಿಗಳಿಂದ ಸ್ಫೂರ್ತಿ ಪಡೆದವರು ಸಾಕಷ್ಟು ಜನರಿದ್ದಾರೆಂದು ತಿಳಿದಾಗ, ಅವರ ಭಾವ ಕುಸುಮಗಳಿಗೆ, ಅವರ ಭಾವನೆಗಳಿಗೆ, ಆಶಯಗಳಿಗೆ, ಉತ್ಸಾಹಕ್ಕೆ ಒಂದು ವೇದಿಕೆಯಾಗಿ, ಕವಿಗೋಷ್ಠಿ ಏರ್ಪಡಿಸಿ, ಅವರು ವಾಚಿಸಿದ ಎಲ್ಲ ಕವನಗಳನ್ನು ಸೇರಿಸಿ ಯಾಕೆ ಈ-ಬುಕ್ ನ್ನು ಪ್ರಕಟಿಸಬಾರದು ಅನ್ನುವ ಕಲ್ಪನೆ ಬಂತು. ಆ ಉತ್ಕಟತೆಯ ಉಗಮದಿಂದಲೇ ಕವಿಗಳು ವಾಚಿಸಿದ ಕವನಗಳ ಈ ಕಾವ್ಯಾಂಜಲಿ, 'ಕವನ ಸಂಕುಲ'.

ಕವಿಗೋಷ್ಠಿಯಲ್ಲಿ ಭಾಗವಹಿಸಿದ ಕವಿಗಳ ಪರಿಚಯ ಅಗತ್ಯವೆನಿಸಿದ್ದರಿಂದ ನನ್ನ ಸೀಮಿತ ತಿಳುವಳಿಕೆಯಲ್ಲಿ ಅವರ ಪುಟ್ಟ ಪರಿಚಯ ಹಾಗೂ ಅವರ ಕವನಗಳ ಕುರಿತ ಅತಿಪುಟ್ಟ ನನ್ನ ಅನಿಸಿಕೆ ದಾಖಲಿಸುವುದು ಅಭಿಮಾನದ ಸಂಗತಿ ಎನಿಸಿತು.

ಪ್ರತಿಷ್ಠಿತ ಕಂಪನಿಯೊಂದರಲ್ಲಿ ಚೇರ್ಮನ್ ಹಾಗೂ ಇಂಜಿನಿಯರ್ ಆದ ಈಗಾಗಲೇ ಎರಡು ಕೃತಿ ರಚಿಸಿರುವ ಬಿ ವಿ ರಾವ್ ಅವರ ಕವನ....... ಪ್ರಕೃತಿಗೆ ನಿವೇದನೆ ಯಲ್ಲಿ ಉತ್ಕರ್ಷಕ್ಕೆ ದೈವೀದತ್ತವಾದ, ಪ್ರಕೃತಿಯ ಬಹುರೂಪತೆಯನ್ನು ಕೊಂಡಾಡುವ ಪರಿ, ಕೃತಜ್ಞತಾ ಭಾವ ಸುಂದರವಾಗಿ ಅಭಿವ್ಯಕ್ತವಾಗಿದೆ!"

ಚಿಂತಾಮಣಿ ಸಭಾಹಿತರು ಮೂಲತಃ ಗೋಕರ್ಣದವರು, ಸದ್ಯ ಮುಂಬಯಿ ನಿವಾಸಿ. ಅವರು ಚಿಂತಕರು ಹಾಗೂ ಹವ್ಯಾಸೀ ಲೇಖಕರು. ಅವರ ಕವನ, ಕತೆ, ವಿಮರ್ಶೆ, ಲೇಖನಗಳು, ಹಲವಾರು ಪತ್ರಿಕೆಗಳಲ್ಲಿ ಬೆಳಕು ಕಂಡಿರುತ್ತವೆ. ಈ ಸಂಕಲನದಲ್ಲಿ ಅವರ ಕವನ....... "ಆದಿತ್ಯ ವೈಭವ' ದಲ್ಲಿ ಕಾಣುವದು, ಮುಂಜಾವಿನ ಉತ್ಸುಕ ಘಳಿಗೆಯಲ್ಲಿ ಮೂಡುವ, ರೋಮಾಂಚಕವಾಗಿ ಅರಳುವ ಒಂದು ಕ್ಷಣ! ........ 'ಪ್ರತಿಬಿಂಬ' ಕವನದಲ್ಲಿ,... ಗಂಡು ಹೆಣ್ಣಿನ ಭಾವ ಬಂಧದ ಅಧ್ಯಾಯದಲ್ಲಿ ಮನಗಾಣುವ , ಪರಸ್ಪರತೆಯ ಅನುಮೋದನೆಯ ನುಡಿಮುತ್ತು! 'ಬಂಗಾರ'ವೆಂದರೆ, ದೂರದಲ್ಲಿರುವ ತನ್ನ ಮುದ್ದು ಕಂದ ಕೃಷ್ಣನ ಕುಣಿದಾಟವನ್ನು ಕಲ್ಪಿಸಿಕೊಂಡು ಆನಂದಿಸುವ ಮಮತೆಯ ತಾಯಿ ದೇವಕಿಯ ಭಾವ! 'ಒಂದು ಕನಸಿ'ನಲ್ಲಿ ಕಾಣುವದು, ಆವಿರ್ಭಾವದ ಅಪರೂಪ ಕ್ಷಣದ ಅನುರೂಪ!"

ಜಿ ಪಿ ನಾಗರಾಜ ಅವರು ನಮ್ಮ ಸಂಘದ ನಿವೃತ್ತ ಸದಸ್ಯರು ಹಾಗೂ ಉತ್ತಮ ಕ್ರೀಡಾಪಟು. ಕಳೆದ 25 ವರ್ಷಗಳಿಗೂ ಹೆಚ್ಚು, ಪ್ರತಿ ವರ್ಷ ಸಂಕ್ರಾಂತಿಯ ಸಂದರ್ಭದಲ್ಲಿ ಕವನ ರಚಿಸಿ ನಮ್ಮ ಸಂಘದ ಎಲ್ಲ ಸದಸ್ಯರಿಗೆ ಎಳ್ಳು ಬೆಲ್ಲ ಹಂಚುತ್ತಿರುವವರು. ಈ ಸಂಕಲನದಲ್ಲಿ ಅವರ 'ಮೆರೆದು ಮರೆಯಾದವರು' ಕವನದಲ್ಲಿರುವದು : ಮಾನವ ಜೀವನದ ಅಭಿನ್ನ ಅಂಗವಾದ, ಉದಯ - ಪ್ರವರ್ಧನ - ಅಸ್ತಗಳ ರೇಖಾ ನಕ್ಷೆಯಲ್ಲಿ ಕಂಡು ಅನುಭವಿಸುವ ಏರಿಳಿತಗಳ ಒಂದು ನಿವೇದನೆ. 'ಇನ್ನೂ ಸಿಕ್ಕಿಲ್ಲ' ಕವನದಲ್ಲಿ, 'ತನ್ನಂತೆ ಪರರ ಬಗೆದೊಡೆ' ದಾಗಲೂ ಕಾಣದ ಕೈಲಾಸದ ಅನವರತ ಅನ್ವೇಷಣೆಯ ಛಲದ ಕಾತುರ! ಕವನ 'ಹೊಸವರ್ಷ'ದಲ್ಲಿ, ಹೊಸ ನೀರೀಕ್ಷೆಯ ಹೊಸತನವನ್ನು ಬಯಸಿ, ಬಯಸಿ ಹುಡುಕಾಡುವ ಮನೋಗಾಥೆ!"

ಪದವಿಪೂರ್ವ ಕಾಲೇಜಿನ ನಿವೃತ್ತ ಪ್ರಾಚಾರ್ಯ ಜಿ ವಿ ಹೆಗಡೆ ದುಗ್ಗೂರು ಅವರು ತಮ್ಮ ಕವನ 'ಹಾರೈಕೆ'ಯಲ್ಲಿ, ಮನುಷ್ಯ- ಮನುಷ್ಯರ ಸಂಬಂಧ ಹೇಗಿದ್ದರೆ ಚೆನ್ನ ಅನ್ನುವದು, ಕವಿಮನದ ಉತ್ಕಟ ಆಶಯ! ಚುಟುಕುಗಳಲ್ಲಿ ಬದುಕಿನ ಹಲವು ಮುಖಗಳನ್ನು ಬಣ್ಣಿಸಿದರೆ, 'ನಗ್ನ ಸತ್ಯ'ದಲ್ಲಿ, ಪ್ರಕೃತ ಸಮಾಜದ ಬದಲಾದ ಪರಂಪರೆಯ ವರ್ಣನೆಯಿದೆ. ನತದೃಷ್ಟನ ಆತ್ಮಕಥೆಯ ಕೊನೆಯಲ್ಲೊಂದು, 'ಶುಭ ಕಾಮನೆ' ವಿಶೇಷವಾಗುತ್ತದೆ!"

ಧೀರೇಂದ್ರ ನಾಗರಹಳ್ಳಿ ಅವರು ಪ್ರಸಿದ್ಧ ಅಲಂಕಣಕಾರರು, ಈಗಾಗಲೇ ನಾಲ್ಕು ಕೃತಿಗಳನ್ನು ಪ್ರಕಟಿಸಿದ್ದು, ಈ ಕವಿಗೋಷ್ಠಿಗಾಗಿ ಅವರು ಬರೆದ
'ಸೌದೆ ತೀರಿದ ಮೇಲೆ' - ಕವನದಲ್ಲಿ, ಕಷ್ಟದ ಬದುಕಿನ ಸ್ಪಷ್ಟ ಸತ್ಯದ, ನಿರಾಳ ಅನುಭೂತಿಯಿದೆ. 'ರೈತನಾಗುವದು ಸುಲಭವಲ್ಲ' - ಕವನದಲ್ಲಿ, ರೈತನ ಬದುಕಿನ ಬವಣೆಯ ಹಲಾವಾರು ಮಗ್ಗಲುಗಳ ಜೀವಂತ ಚಿತ್ರಣವಿದೆ!"

ಹಾಸ್ಯ ಲೇಖನ, ಹನಿಗವನಗಳ ಸಂಕಲನ ಪ್ರಕಟಿಸಿರುವ ಸಿವಿಲ್ ಇಂಜಿನಿಯರ್ ಪತ್ತಂಗಿ ಎಸ್. ಮುರಳಿ ಯವರು ತಮ್ಮ ಹನಿಗವನ
ದರ್ಜೆ ಯ ಪಾಠ ದ ನಂತರ ಚಿಂತೆ ಪೇಚು ಗಳಲ್ಲಿ ಸಿಲುಕಿದರೂ, ಶಕ್ತಿ ಯನ್ನು ಉಪಯೋಗಿಸಿ ಅಂತ್ಯ ಫಲ ಸಾರಯುತ ಹನಿಗವನಗಳ ಸರಮಾಲೆಯನ್ನೇ ಇಟ್ಟಿದ್ದಾರೆ.

ಕೆ. ವಿ. ಲಕ್ಷ್ಮಣ ಮೂರ್ತಿ, ನಿವೃತ್ತ ಅರಣ್ಯ ಸಂರಕ್ಷಣಾಧಿಕಾರಿಗಳು. ಕರ್ನಾಟಕದ ವಿವಿಧೆಡೆ ಹಾಗೂ ಭಾರತದ ಇತರ ರಾಜ್ಯಗಳಲ್ಲಿಯೂ ಕನ್ನಡ ಸಂಘಟನೆಯಲ್ಲಿ ತೊಡಗಿಕೊಂಡು ಪುಸ್ತಕ ಪ್ರಕಟಣೆಯ ಸಾಹಸ ಕೈಕೊಂಡವರು. 16 ಕ್ಕೂ ಹೆಚ್ಚು ಕೃತಿ ಸಂಪಾದನೆ ಮಾಡಿದ್ದು ಶ್ರೀಮಾತಾ ವೈಷ್ಣೋದೇವಿ ರಾಣಿ ಅಬ್ಬಕ್ಕ ದೇವಿ ಕೃತಿಯಿಂದಾಗಿ ರಾಜ್ಯಾದ್ಯಂತ ಪ್ರಸಿದ್ಧರು.
ಅವರ ಕವನ ...... 'ನವ ಭಾರತ'ದಲ್ಲಿ, ಆದರ್ಶದ ಅಪೇಕ್ಷೆಗಳಿಗೆ ಇಡುವ ಹೆಜ್ಜೆಗಳ ಸವಾಲುಗಳು ಕಂಡರೆ, 'ನಮ್ಮ ಪ್ರೀತಿಯ ನಾಯಿ'ಯಲ್ಲಿ, ಸಹಾನುಭೂತಿಯ ಪ್ರತಿರೂಪ! 'ನಗು'ವಿನಲ್ಲಿ ಗೆಲುವ ಸಾಧಿಸಿ, 'ಕವನ'ದ ಹಲವು ಆಯಾಮಗಳನ್ನು ತೆರೆದಿಟ್ಟಿದ್ದಾರೆ."

ವಿಜಯಪುರ ಜಿಲ್ಲೆಯ ಸಿದ್ದಣ್ಣ ಸೊನ್ನದ
ಕೇಂದ್ರ ಸರ್ಕಾರದ ರಾಷ್ಟ್ರೀಯ ಮಾದರಿ ಸಮೀಕ್ಷೆ ಕಚೇರಿಯಿಂದ ಹಿರಿಯ ಅಂಕಿಅಂಶ ಅಧಿಕಾರಿಯಾಗಿ ನಿವೃತ್ತರು.
ಹೆಮ್ಮೆ , ದಯೆ , ಕೃತಜ್ಞತೆಗಳೇ ಅವರ
ಬದುಕಿನ ಮೂಲ ಮಂತ್ರ. ಅವರ ಕವನ
ಸಂಕ್ರಾಂತಿ'ಯಲ್ಲಿ ಸಾಮರಸ್ಯದ ಸಂದೇಶ ಸಾರಿದರೆ, ಶರಧಿಯತ್ತ ಓಡುವ 'ಶರಾವತಿ'ಯಲ್ಲಿ, ವಿಶ್ವೇಶರಯ್ಯನವರ ದೂರದೃಷ್ಟಿಯ ಜಲಸಿರಿಯ ಬೆಳಕನ್ನು ಸೆರೆಹಿಡಿದಿದ್ದಾರೆ. ಉಳಿದ ಮೂರು ಕವನಗಳಲ್ಲಿ, ಭಾರಗಳ ಸರಮಾಲೆಯೇ ಇದೆ!

ಕೊಪ್ಪರಂ ಅನ್ನಪೂರ್ಣ ಮಕ್ಕಳ ಸಾಹಿತಿ, ಹಾಸ್ಯ ಸಾಹಿತಿ. ಅಣಕು ಹಾಡುಗಳಿಗಾಗಿ ಪ್ರಸಿದ್ಧರು. ಹತ್ತಕ್ಕೂ ಹೆಚ್ಚು ಕೃತಿ ಪ್ರಕಟಿತ. ಈ ಸಂಕಲನದಲ್ಲಿ ಅವರ ಕವನ ವಿಶಿಷ್ಟವಾದುದು. ಈ "ಕನ್ನಡದ ಕವನದಲ್ಲಿ, ಕವಯಿತ್ರಿಯವರು, ಕಕಾರದ ಕರ್ತವ್ಯವನ್ನು, ಕಟ್ಟುನಿಟ್ಟಾಗಿ ಕ್ರೋಢೀಕರಿಸಿದ್ದಾರೆ.!"

ನಮ್ಮ ಲೆಕ್ಕಾಧಿಕಾರಿಗಳ ಸಂಘದ ಹಿರಿಯ ಸದಸ್ಯ, ನಿವೃತ್ತ ಹಿರಿಯ ಅಧಿಕಾರಿ
ಎಂ ಎಸ್ ವೆಂಕಟೇಶ ಅವರು ಉತ್ತಮ ಕ್ರೀಡಾಪಟು, ಅಧ್ಯಾತ್ಮ ಜೀವಿ, ಆಕರ್ಷಕ ಕೈಬರಹಕ್ಕಾಗಿ ಪ್ರಸಿದ್ಧರು. ಅವರ "ಮೊದಲ ಮೂರೂ ಕವನಗಳಲ್ಲಿ ಕವಿಯ ಆಧ್ಯಾತ್ಮಿಕ ಒಲವು ತುಂಬಿ ತುಳುಕುತ್ತದೆ. ಕವನ- ಸಾರ್ಥಕ್ಯದಲ್ಲಿ ಒಂದು ಸ್ವಗತವಿದೆ!"

ಪ್ರತಿಷ್ಠಿತ ಕೆಂಪೇಗೌಡ ಪ್ರಶಸ್ತಿ ವಿಜೇತೆ, ಜಾನಪದ ಕಲಾವಿದೆ ಡಾ. ಅಂಬುಜಾಕ್ಷಿ ಬೀರೇಶ ಅವರು,ಅವರ...... 'ಅನಂತದೆಡೆಗೆ' ಕವನದಲ್ಲಿ, ಜ್ಞಾನ ನಿಧಿಯ ಮಹಾ ಚೇತನಕ್ಕೊಂದು ಕೋರಿಕೆಯನ್ನಿಟ್ಟರೆ, 'ಸಮರ್ಪಣೆ'ಯಲ್ಲಿ, ತ್ಯಾಗವನ್ನು ಮುಡಿಪಾಗಿಡುತ್ತಾರೆ. 'ಹೀಗೇಕೆ ಮಾಡಿದಿರಿ' - ಕವನದಲ್ಲಿ,ಒಂದು ಅನಪೇಕ್ಷಿತ ವಿಲಕ್ಷಣದ ನೋವು,

ಮೃದುವಾಗಿ ಮಿಡಿಯುತ್ತದೆ!"

ಕೆಪಿಟಿಸಿಎಲ್ ನ ನಿವೃತ್ತ ಸಹಾಯಕ ಕಾರ್ಯನಿರ್ವಾಹಕ ಇಂಜಿನಿಯರ್, ಎಂ ಎ (ಜಾನಪದ), ಕನಕಪುರ ತಾಲೂಕ ಸಾಹಿತ್ಯ ಸಮ್ಮೇಳನದ ಸರ್ವಾಧ್ಯಕ್ಷರಾದ, ಹಲವಾರು ವಿದೇಶ ಪ್ರವಾಸ ಕೈಗೊಂಡು ಅನುಭವಿಗಳಾದ ಎಲ್ ಚಿಕ್ಕಲಿಂಗೇಗೌಡ
ಅವರು ಈ ಸಂಕಲನದ ಎಲ್ಲ ಹನಿಗವನಗಳಲ್ಲಿ, ಯಾರೂ ಮೆಚ್ಚಬಹುದಾದ, ಎಚ್ಚರಿಕೆಯ ಗಂಟೆಯನ್ನು ತಪ್ಪದೇ ಬಾರಿಸುತ್ತಾರೆ."

ನಿಂಗಮ್ಮ ಬಾವಿಕಟ್ಟಿ ಅವರು ಬಾಗಲಕೋಟೆ ಜಿಲ್ಲೆ ಹುನಗುಂದದವರು. ಈಗಾಗಲೇ ಆಧುನಿಕ ವಚನ ಕೃತಿಗಳು ಹಾಗೂ ಎರಡು ಕವನ ಸಂಕಲನಗಳನ್ನು ರಚಿಸಿರುತ್ತಾರೆ. ಅವರ ಅಜ್ಜಿಯರು ಕವಿತೆಯಲ್ಲಿ, ಶುದ್ಧ ಅಂತಕರಣದ ಮುದ್ದು ಅಜ್ಜಿಯವರನ್ನು ಹುಡುಕುವ ತಹ ತಹ ಎದ್ದು ಕಾಣುತ್ತದೆ."

ಜಿ. ಪ್ರಭಾಕರ ಗಂಗೊಳ್ಳಿ ಅವರು ಅಂಚೆ ಇಲಾಖೆಯಿಂದ ನಿವೃತ್ತರು. ಹಲವು ಹಿರಿಯ ಸಾಹಿತಿಗಳ ನಿಕಟ ಒಡನಾಟ ಇದ್ದವರು. ಹಲವಾರು ಸಂಘಟನೆಗಳಿಗೆ ಉದಾರ ದೇಣಿಗೆ ನೀಡುತ್ತಿರುವವರು.
ಪ್ರಸ್ತುತ ವಿಷಯಗಳ ಕುರಿತು ಜಾಣ್ಮೆಯಿಂದ ತಮ್ಮ ಕಟುವಾದ ವ್ಯಂಗ್ಯೋಕ್ತಿಗಳಿಂದ ಹಾಸ್ಯ ಭರಿತ ಮಾತುಗಳಿಂದ ಚುಟುಕುಗಳನ್ನು ಹೆಣೆದಿದ್ದಾರೆ.

ಕರ್ನಾಟಕ ಸರ್ಕಾರದ ಪ್ರತಿಷ್ಠಿತ ಕಿತ್ತೂರ ರಾಣಿ ಚೆನ್ನಮ್ಮ ಪ್ರಶಸ್ತಿ ವಿಜೇತ ಡಾ. ಶುಭಾ ವಿಷ್ಣು ಸಭಾಹಿತ, ಈಗಾಗಲೇ ಎರಡು ಕವನ ಸಂಕಲನಗಳನ್ನು ಹೊರತಂದಿದ್ದಾರೆ. ಅನೇಕ ಸಾಹಿತ್ಯ ಸಂಘಟನೆಗಳನ್ನು ಮುನ್ನಡೆಸುತ್ತಿದ್ದಾರೆ. ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರದವರಾದ
ಇವರ ಈ ಸಂಕಲನದ ಕವನ.....
"ದೇಶಾಭಿಮಾನ, ಪ್ರಕೃತಿ ಉಳಿಸು, ಕನ್ನಡ ರಥ ಯಾತ್ರೆ ಹಾಗೂ ಹೆಣ್ಣು - ಗಳಲ್ಲಿ, ಬದುಕಿನ ಆದರ್ಶಗಳನ್ನು ಅರಸಿದರೆ, 'ಒಂಟಿತನ'ದಲ್ಲಿ ಹೊಸತಾಗಿ ಮದುವೆಯಾದ ಹೆಣ್ಣಿನ ಆತುರ, ಕಾತರ,ನೋವು, ಆಶಯಗಳ ಭರ್ಜರೀ ಸಂಗಮದಲ್ಲಿ, ಒಲವನ್ನು ಹೆಣೆದಿದ್ದಾರೆ!"

ಎ ರಾಮಣ್ಣ ಹಾಸ್ಯ ಸಾಹಿತಿ, ಪತ್ರಕರ್ತರು. ಉತ್ತಮ ಉಪನ್ಯಾಸಕರು. ಇವರ 'ಸಿಹಿ-ಕಹಿ' ಹಾಗೂ 'ರಾಜಕಾರಣಿ' ಎರಡೂ ಕವನಗಳಲ್ಲಿ, ಅನುಭವದ ಮೂಸೆಯೊಳಗಿನ ಪಕ್ವವಾದ ಜೀವನ ಸತ್ಯವಿದೆ."

ನಮ್ಮ ಕೆಪಿಟಿಸಿಎಲ್ ನಿಂದ ನಿವೃತ್ತರಾದ ಸ. ಜಗನ್ನಾಥ ಅವರು ಹನಿಗವನಗಳ ಸರದಾರ ಎಂದೇ ಪ್ರಸಿದ್ಧರು, ಈಗಾಗಲೇ 12 ಕೃತಿಗಳನ್ನು ಪ್ರಕಟಿಸಿದ್ದು ಸಿನಿಮಾ ಗಳಿಗೂ ಹಾಡುಗಳನ್ನು ರಚಿಸಿರುತ್ತಾರೆ
"ಇವರ ಚುಟುಕುಗಳಲ್ಲಿ, ಮುದನೀಡುವ ಕಿತಾಪತಿ ಭಾಷೆಯ, ಒಲವಿನ ಸಪ್ತಾಹವೇ ಇದೆ!"

ಡಾ. ಎಂ. ಶಿವಸ್ವಾಮಿ ಅವರು ಪೊಲೀಸ್ ಇಲಾಖೆಯಿಂದ ನಿವೃತ್ತರು. ಹವ್ಯಾಸಿ ಗಾಯಕ ಹಾಗೂ ರಂಗಭೂಮಿ ಕಲಾವಿದ. ಈಗಾಗಲೇ ನಾಲ್ಕು ಕೃತಿಗಳನ್ನು ಹಲವು ಸಂಪಾದಿತ ಕೃತಿಗಳನ್ನು ಹೊರತಂದಿದ್ದಾರೆ. ಇಲ್ಲಿನ ಕವನದಲ್ಲಿ ಅವರು
"ಕೊರೆತದ ಬದುಕಲ್ಲಿ ನೊಂದು ಬಂದವರು, ಗೊತ್ತಿನಲ್ಲಿರುವ ಗುರಿಯನ್ನು ಗುರುತಿಸಿ, 'ತೊಂದರೆ'ಗೊಂದು ಸಲಹೆ ನೀಡಿದ್ದಾರೆ! "

ಹೇಮಂತ ಲಿಂಗಪ್ಪ ನಮ್ಮ ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಯ ಇಂಜಿನಿಯರ್. ಮತ್ತೆ ಮತ್ತೆ ಮಳೆ ಕವನ

ಸಂಕಲನದ ಮೂಲಕ ಬೆಳಕಿಗೆ ಬಂದಿರುವ ಉದಯೋನ್ಮುಖ ಕವಿ. ಈ ಸಂಕಲನದಲ್ಲಿರುವ ಅವರ ಕವನ ಪುನರಾವರ್ತನೆ, ಜೀವನ-ಪ್ರೇಮ-ಮುನಿಸು-ವಿರಹಗಳ ಆವರ್ತನ

ಈ ಸಂಕಲನದ ಕವನಗಳು
ಪ್ರೀತಿಯಾದರೆ ದಯವಿಟ್ಟು ಈ ಕವಿಗಳಿಗೆ ಬರೆದು ತಿಳಿಸಿ. ಅದೊಂದು ಪರೋಕ್ಷ ಪ್ರೋತ್ಸಾಹನವೂ ಆದೀತು!

ಧನ್ಯವಾದಗಳೊಂದಿಗೆ,

ನಿಮ್ಮವ,
ವಿಶ್ವೇಶ್ವರ ಗಾಯತ್ರಿ,
ಕವಿಪ್ರನಿನಿ ಲೆಕ್ಕಾಧಿಕಾರಿಗಳ ಸಂಘದ ಹಾಗೂ ಗಾಯತ್ರಿ ಗೆಳೆಯರ ಬಳಗದ ಪರವಾಗಿ.

## ಪ್ರಕೃತಿಗೆ ನಿವೇದನೆ

ಬಗೆಯ ಬಗೆಯ ಅಂದ ಚೆಂದ ಬಣ್ಣ ಹೂಗಳೇ
ಸ್ವರ್ಗ ಸೊಬಗು ಜಗಕೆ ಬಂತು ನಿಮ್ಮ ರೂಪಕೇ
ಭಾಗ್ಯ ನಮ್ಮ ಪುಣ್ಯ ನಿಮ್ಮ
ದೇವಿ ಮುಡಿಯಲಿ
ಕಂದ ಕರೆದನೆಂದು ಹೇಳಿ
ದೇವಿ ಕಿವಿಯಲಿ

ನೂರು ವರುಷ ಬಾಳಿ ಬೆಳೆದ
ಕಲ್ಪ ವೃಕ್ಷವೇ
ನೂರು ಕೊಂಬೆ ಪಕ್ಷಿಧಾಮ
ದೇವ ವೃಕ್ಷವೇ
ಪುನಃ ಹೇಳು ಪುನಃ ಹೇಳು ಅನ್ನಪೂರ್ಣೆಗೆ
ದಾರಿ ತಪ್ಪಿ ಕಾಡಿನಲ್ಲಿ ಕಂದ ಕರೆವನೇ

ಜಗದ ಜನರ ಪಾಪ ಕಳೆವ
ದೇವಿ ಗಂಗೆಯೇ
ಭಕ್ತ ರಾಮ  ಕಂಡ ದೇವಿ
ನಿನ್ನ ಮಧ್ಯೆಯೇ
ಮರಳು ರಾಶಿ ದಾಟಿ ಅಲೆದೆ
ದಿವ್ಯ ಮಾತೆಗೆ

ಕಂದ ಅಳುವನೆಂದು
ಹೇಳು ಅನ್ನಪೂರ್ಣೆಗೇ

ಲೋಕವೆಲ್ಲ ವ್ಯಾಪಿಸಿರುವ
ವಾಯು ದೇವನೇ
ಎಲ್ಲ ಜೀವ ಪ್ರಾಣದಾತ ಕಾಣಲಾರದೇ
ಬೇಡಿಕೊಂಬೆ ನೂರು ಬಾರಿ ಜೀವದಾತ್ಮನೇ
ಕಂದ ಕರೆದನೆಂದು ಹೇಳು ಅನ್ನಪೂರ್ಣೆಗೇ

ಎಂದಿಗೆಂದು ಮೇಲು ಮುಖಿ
ಆಗ್ನಿ ದೇವನೇ
ಹೋಮದಲ್ಲಿ ಬಂದು ನೀನು
ತಿಳಿಪೆ ದೇವಿಗೆ
ನನ್ನದೊಂದು ಬಿನ್ನವಿದು
ತಿಳಿಸು ದೇವಿಗೆ
ಕಂದ ಕರೆದನೆಂದು
ಹೇಳು ಅನ್ನಪೂರ್ಣೆಗೆ

ಬಿ ವಿ ರಾವ್ **9880201725**

# ನವಭಾರತ

ನಮ್ಮ ಸುಂದರ ದೇಶ ಭಾರತ
ನಾವೆಲ್ಲಾ ಮಾಡುವ ನವಭಾರತ

ನವ ಪೀಳಿಗೆಯ ಯುಕ್ತಿ
ಯುವಕ ಯುವತಿಯರ ಶಕ್ತಿ

ಎಲ್ಲಾ ಹಿರಿಯರ ದೇಶಭಕ್ತಿ
ನಮ್ಮ ಭಾರತಕ್ಕೆ ನೀಡಿದ ಶಕ್ತಿ

ವಿಶ್ವದಲಿ ಎನಿಸಲಿ ಉಚ್ಚ ಭಾರತ
ನಮಗೆ ಬೇಕು ಸ್ವಚ್ಛ ಭಾರತ

ಪರಿಸರ ರಕ್ಷಣೆ ನಮ್ಮೆಲ್ಲರ ಆದ್ಯತೆ
ಇದಕೆ ಆಶೀರ್ವದಿಸುವಳು ನಮ್ಮ ಭಾರತ ಮಾತೆ

ಪರಿಸರ ರಕ್ಷಣೆಯಲಿ ಭಾರತವಾಗಲಿ ಮಾದರಿ
ಇದ ಯಶಸ್ವಿಗೊಳಿಸಲು ಇರಲಿ ನಮ್ಮೆಲ್ಲರ ಹಾಜರಿ

ಸಕಲರಿಗೂ ಸಿಗಲಿ ಶುದ್ಧ ಕುಡಿಯುವ ನೀರು
ಇದಕಾಗಿ ನೀ ಸದಾ ಜಾಗ್ರತೆಯಾಗಿರು

ಮರ ನೀಡುವುದು ಶುದ್ಧ ಗಾಳಿ ಉಚಿತವಾಗಿ
ಅದಕೆ ನಾವೆಲ್ಲ ನಿಲ್ಲೋಣ ಮರದ ಪರವಾಗಿ

ನವಬಾರತಕೆ ಕೃಷಿಯಾಗಲಿ ಪ್ರಧಾನ
ಇದಕೆ ಎಂದೂ ಆಗದಿರಲಿ ನಿಧಾನ

ನಮ್ಮೆಲ್ಲರ ಆರೋಗ್ಯ ಗ್ರಾಮದ ಆರೋಗ್ಯ
ಗ್ರಾಮಗಳ ಆರೋಗ್ಯ ನವಭಾರತದ ಆರೋಗ್ಯ

## ನಮ್ಮ ಪ್ರೀತಿಯ ನಾಯಿ

ನಮ್ಮೆಲ್ಲರ ಮುದ್ದಿನ ನಾಯಿಗೆ ಜನಿಸಿದವು ಮರಿಗಳು ಆರು
ಹಲವರು ಐದು ಮರಿಗಳನು ಸಾಕಲು ತಗೆದುಕೊಂಡು ಹೋದರು
ನಮಗೆ ಉಳಿದದ್ದು ಒಂದೇ ಒಂದು ಮರಿ
ನಮ್ಮೆಲ್ಲರ ಪಾಲಿಗೆ ಪ್ರೀತಿಯಾಗಿ ಉಳಿಯಿತು ಪುಟ್ಟ ಮರಿ

ಅದರ ಬಣ್ಣ ಕಪ್ಪು
ಪಾಪ ಅದರದೇನು ತಪ್ಪು?

ಆ ಮರಿ ಎಂದಿಗೂ ಮಾಡಿಲ್ಲ ತಪ್ಪು
ಅದಕೆ ಮನೆಯಲ್ಲಿ ಗಪ್ ಚಿಪ್

ಗಾಂಭೀರ್ಯದ ನಡಿಗೆ ಶಾಂತತೆ
ಎಲ್ಲರಿಗೂ ಹಿಡಿಸಿತು ಇರಲು ಅದರ ಜೊತೆ

ಕಾಲ ಕ್ರಮೇಣ ಅದರ ತಾಯಿ ದೂರವಾಯಿತು
ಅದರ ಪಾಲಿಗೆ ಅದು ಒಂಟಿಯಾಯಿತು

ದಿಕ್ಕು ತೋಚದಾಯಿತು ಮನಕೆ ದುಃಖವಾಯಿತು
ಅಂದಿನಿಂದ ಅದು ಒಂಟಿಯಾಗಿ ಉಳಿಯಲು ಬಯಸಿತು

ತಾಯಿಗೆ ತಾಯಿಯೇ ಸಮ
ನಾವಾಗಲಿಲ್ಲ ಅದರ ತಾಯಿಯ ಸಮ

ಜೀವನದ ಪಯಣದಲಿ ನಾವೆಲ್ಲರೂ
ಅರಿತು ಬಾಳುತಿರುವೆವು ಒಬ್ಬರನೊಬ್ಬರು

## ನಗು

ನಗು ನಗು
ಇದು ಆರೋಗ್ಯದ ಗುನುಗು

ಸದಾ ನೀ ನಗು
ನಗುತಿರು ಮಗು

ನಿನ್ನ ನಗು
ಮನೆಯಲಿ ಎಲ್ಲರಿಗೂ ಸಂತಸದ ನಗು

ನೀ ನಗುವುದು
ಎಲ್ಲರ ಪ್ರೀತಿಗಳಿಸುವುದು

ನಗುವೇ ನಾಕ
ಅಳುವೇ ನರಕ

ಎಲೈ ಮಾನವ
ಜೀವನದಲಿ ನಗು ಒಮ್ಮೆಯಾದರೂ

ನಗು ಕೊಳ್ಳುವ ವಸ್ತು ಅಲ್ಲ
ಅದಕೆ ತೆರಿಗೆಯೂ ಇಲ್ಲ

ನಗು ಇರಬೇಕು ದೇಹಕೆ
ಅದರಿಂದ ಪ್ರಯೋಜನ ದೇಶಕೆ

ನಗುವಿನಿಂದ ಚೆಲುವು
ನಗುವಿನಿಂದ ಒಲವು

ಒಲವಿನಿಂದ ಸುಖಮಯ ಜೀವನ
ಅದುವೇ ಸ್ವರ್ಗ ಸಮಾನ

## ಕವನ

ನಿನ್ನ ಉಚ್ಚರಿಸಲು ಸರಳ
ನಿನ್ನ ಬರೆಯುವವರು ವಿರಳ

ನೀ ಮೂರಕ್ಷರಗಳಿಂದ ಜನಿಸಿರುವೆ
ಸಾಹಿತ್ಯಾಸಕ್ತರಿಗೆ ಸಂತಸವ ನೀಡುತ್ತಿರುವೆ

ನಿನ್ನ ಜನನವಾಗಿ ಸಾವಿರಾರು ವರ್ಷಗಳು ಕಳೆದವು
ಆಗಾಗ್ಗೆ ಕವಿ ಸಮ್ಮೇಳನಗಳು
ಮೇಳೈಸುತ್ತಿರುವವು

ನಿನ್ನ ರಚಿಸುವ ಮುನ್ನ ಇರುವ ಹಂಬಲ
ಪೂರ್ಣಗೊಂಡನಂತರ ಓದಲು ಇರುವುದು ಕುತೂಹಲ

ನಿನ್ನ ಬೆಂಬಲ ಎನಗಿರಲಿ
ನನ್ನ ಹಂಬಲ ಸಾರ್ಥಕವಾಗಲಿ

ಕನ್ನಡ ಕವನವ ಬರೆಯುವವರು ನೂರಾರು
ಬರೆದಿರುವವರು ಕವನಗಳ ಸಾವಿರಾರು

ನಾಡಿನಲ್ಲಿ ಇರುವವರು ಏಳು ಕೋಟಿ ಕನ್ನಡಿಗರು
ಆದರೂ ಹೆಚ್ಚಾಗಬೇಕು ಕನ್ನಡ ಕವನಗಳ ಓದುಗರು

ಜೀವನ ಎಂದರೆ ಜೀ +ವನ
ಕವನ ಎಂದರೆ ಕ + ವನ

ಕಾಡಿದ್ದರೆ ನಾಡು
ನಾಡಿದ್ದರೆ ಪಾಡು

ಜೀವ ಇದ್ದರೆ ಜೀವನ
ಕವಿ ಇದ್ದರೆ ಕವನ

ಕವಿ

ರವಿ ಕಾಣದ್ದನ್ನು ಕವಿ ಕಂಡ
ಸುಲಭವಾಯಿತು ತಿಳಿಯಲು ಈ ಬ್ರಹ್ಮಾಂಡ

ರವಿ ಎರಡಕ್ಷರಗಳಿಂದ ಸೃಜನ
ಕವಿ ಎರಡಕ್ಷರಗಳಿಂದ ಜನನ

ಇಬ್ಬರಲೂ ಒಂದಕ್ಷರ ಸಾಮಾನ್ಯ
ಜಗದಲಿ ಇಬ್ಬರೂ ಅಸಾಮಾನ್ಯ

ಕವಿ ಮನಸು ಬಲು ಹಗುರ
ಮನ ತುಂಬಾ ಇರುವುದು ಕನ್ನಡದ ಅಕ್ಕರ

ಕವಿ ಹೃದಯ ತುಂಬಾ ನಯ
ಕವಿಯ ದೃಷ್ಟಿ ಸದಾ ದೂರದೃಷ್ಟಿ

ಕವಿಯ ಉಪಾಸನೆ
ಕವಿತೆಯ ರಚನೆ

ಕವಿಯ ಒಲವು
ಸದಾ ಗೆಲುವು

ಬೇಗನೆ ಆಗಲಿ ಕವಿಯ ಕವಿತೆಗಳು
ಕನ್ನಡಿಗರ ಮನೆ ಮನೆಗಳ ಆಸ್ತಿಗಳು

ಕವಿಯು ಮಾಡುವ ವಾಚನ
ಶೋತ್ರುಗಳ ಹೃದಯದಲ್ಲಿರಲಿ ಅನುದಿನ

ಶ್ರೀ ಕೆ. ವಿ. ಲಕ್ಷ್ಮಣ ಮೂರ್ತಿ **8762323985**

## ದರ್ಜೆ!

ಆದಾಯ ಇದೆಯೆಂದು
ಬಿಪಿಎಲ್ ಕಾರ್ಡ್
ಎಪಿಎಲ್ ಆಗಿ
ಏರಿತು ಮೇಲ್‌ದರ್ಜೆಗೆ
　　ಆದಾಯ ಇದ್ದರೂ
　　ಮೂಲ ಸೌಕರ್ಯಗಳು
　　ನಿರ್ವಹಣೆ ಆಗದೆ
　　ಇಳಿದವು ಕೆಳದರ್ಜೆಗೆ!

## ಪಾಠ

ವಾಯು ಮಾಲಿನ್ಯದಿಂದ
ತತ್ತರಿಸಿ ಹೋಗಿದೆ
ರಾಜಧಾನಿ ದೆಹಲಿ
　　ಎಚ್ಚರಿಕೆ ವಹಿಸೋಣ
　　ನಮ್ಮ ಬೆಂಗಳೂರೂ
　　ಹಾಗೆ ಆಗದೆ ಇರಲಿ.

**ಚಿಂತೆ**

ಬೆಳಿಗ್ಗೆಯೇ ಚಳಿಚಳಿ
ಹೊರಗೆ ಹೋಗಲು
ಒಪ್ಪುತ್ತಿಲ್ಲ ಮನಸ್ಸು
    ಆಫೀಸಿಗೆ ಹೋಗದಿರೆ
    ಆ ಮ್ಯಾನೇಜರು
    ಕಡಿಯುವನು ಶಿರಸ್ಸು!

**ಪೇಚು!**

ಓ... ಕರಿಯಾ
ಎಂದು ಕೂಗಿದನು
ಹಿಡಿದು ಹಳೆಯ ಗುರುತು
    ಅಂದಿನ ಮಿತ್ರ
    ಇಂದಿನ ಶತ್ರು
    ಎಂಬುದನ್ನೂ ಮರೆತು!

**ಶಕ್ತಿ!**

ಲಂಚ ಕೊಟ್ಟರೆ
ಅಕ್ರಮವೂ
ಸಕ್ರಮ

ಕೊಡದಿರೆ
ಸಕ್ರಮವೂ
ಅಕ್ರಮ!

## ಅಂತ್ಯಫಲ

ನನ್ನ ನನ್ನವಳ ನಡುವೆ
ಪ್ರತಿ ನಿತ್ಯವೂ
ಸವಾಲು ಪ್ರತಿಸವಾಲು
ಜವಾಬು ಪ್ರತಿಜವಾಬು
ಯಾರೇ ಗೆಲ್ಲಲಿ
ಯಾರೇ ಸೋಲಲಿ
ಕೊನೆಗೆ ಅಳುವುದು
ನನ್ನಯ ಜೇಬು.

ಪತ್ತಂಗಿ ಎಸ್. ಮುರಳಿ **9845014223**

## ಆದಿತ್ಯ ವೈಭವ

ಕೆಂಪಿನ ತಂಪಿನ ಸೊಂಪಿನ ಸ್ನಾನ
ಎಳೆಯರುಣನ ಹೊಂಗಿರಣದ ಪಾನ
ಚೆಲುವಿನ ಸಿರಿಯನು ಧರಿಸಿದೆ ಗಗನ
ಬಾನಿನ ಪಾಲಿಗೆ ಇದುವೇ ಕಾಂಚನ

ನೀಲಿಗೆ ಕೆಂಪಿನ ಕಿರಣದ ಲೇಪನ
ಬೆಡಗಿನ ಅಂದದಾನಂದದ ಸಿಂಚನ
ಸುಮದುರವೀಚಣ ಸುಖ ಸೋಪಾನ
ಸವಿದೆನು ಕುಣಿದೆನು ದೃಷ್ಟಿಸಿ ಅರುಣನ

ಅರುಣನ ಕಿರಣಕೆ ಕಾನನ ಆಸನ
ಶುಕಕೋಕಿಲಗಳ ಚಿಲಿಪಿಲಿ ಗಾನ
ಪುಳಕಿತಗೊಂಡಿದೆ ನನ್ನೀ ತನುಮನ
ಇಕೋ ರವಿದೇವನೆ ನಿನಗೀ ವಂದನ

## ಪ್ರತಿಬಿಂಬ

ಮೂಡಿ ನಗುತಿದೆ ನಲಿಯುತ
ನನ್ನ ಹೃದಯದಿ ನಿನ್ನ ಬಿಂಬ

ಮಿನುಗುತಾರೆಯ ಹೊಳಪಿನನ್ದದಿ
ಮೋಡ ಮುಸುಕಿದ ಮರೆಯಲೀ
ಹರಿವ ನೀರಿನ ತಳುಕು ಬಳುಕಲಿ
ಹೊಳೆವ ಮೀನಿನ ತೆರದಲೀ

ಮೂಡಿ ನಗುತಿದೆ ನಲಿಯುತ
ನನ್ನ ಹೃದಯದಿ ನಿನ್ನ ಬಿಂಬ

ಮಲೆಯ ಕಲೆಯಲಿ, ಅಲೆಯ ಬಲೆಯಲಿ
ಪರಿಸರದಲಿ ತಟದಲೀ
ಆ ಚೆಂದವೋ ನಿನ್ನಂದವೋ
ಮಕರಂದವೋ ಆನಂದವೊ

ಕಾಣದಿರುವುದೇ ಕೌತುಕ
ಕಾಣದಿರುವುದೇ ಕೌತುಕ

ಮೂಡಿ ನಗುತಿದೆ ನಲಿಯುತ
ನನ್ನ ಹೃದಯದಿ ನಿನ್ನ ಬಿಂಬ

ನಿನ್ನ ನೇಹದ ಬೆಳಕಿನನ್ಚಲಿ
ಹಂಚಿಕೊಂಡೆನು ಈ ಬದುಕ

ಮೂಡಿ ನಗುತಿದೆ ನಲಿಯುತ
ನನ್ನ ಹೃದಯದಿ ನಿನ್ನ ಬಿಂಬ

ಮೂಡಿ ನಗುತಿದೆ ನಲಿಯುತ
ನಿನ್ನ ಹೃದಯದಿ ನನ್ನ ಬಿಂಬ...

## ಬಂಗಾರ

ಯಾವ ಕನಸಿನ
ರಂಗು ರಂಗಿನ ಚಿತ್ತಾರ,
ಓಡೋಡಿ ಬಂದು ಬಿಮ್ಮಗೆ
ಕುಳಿತ ಕುದುರೆಯ ವಿಹಾರ,
ಓಲಾಡುವ ಹಾರ
ಗರಿಕೆದರಿದ ವಿನ್ಯಾಸ
ಚಿಗುರೊಡೆಯುವ ಲಾಸ್ಯ
ವಿಕಸಿತ ಮಂದಹಾಸ ಮಿನುಗುವ
ಕೌತುಕದ ಕರ್ತಾರ

ಇಂದಲ್ಲ, ನಾಳೆ ತುಳುಕುವ
ಬೆಳಕಿನ ತುಂಬ,
ಕೃಷ್ಣನ ಬಣ್ಣದ ಬಿಂಬ;
ಕುಡಿಯೊಡೆದ ಪ್ರತಿಬಿಂಬ -
ದೇವಕಿಯ ಬಂಗಾರ!

## ಒಂದು ಕನಸು

ಕಂಡೆ ನಾ ಕನಸಿನಲಿ
ಅಮೂರ್ತ ಸ್ವರೂಪ,
ಅನಂತ ನಿರ್ವಿಕಾರ
ನಿರ್ಮಲ ಪ್ರದೀಪ

ಸತ್ಯಾಸತ್ಯತೆಯ
ತಿಳಿಪರದೆ ಸರಿಸಿ,
ಒಳಗೆ ನೋಡಿದೆ
ನಾನು ಕಣ್ಣನಿರಿಸಿ

ಅಂತಃಸತ್ವದ ಪ್ರಬಲ
ಜಲ ಚಿಮ್ಮಿದಾಗ,
ಅಗೋಚರ ಗಾತ್ರವದು
ಮೈದಡವಿದಾಗ

ಅಚ್ಚರಿಯ ಅತಿರೇಕದಲಿ
.ಮನ ಪುಳಕಗೊಂಡು,
ಸರ್ವೇಂದ್ರಿಯಗಳೂ
ಬಲ ಸೆಳೆತಗೊಂಡು

ಅವ್ಯಕ್ತ ತೀಕ್ಷ್ಣತೆಯ
ಜ್ಯೋತಿಯನು ಕಂಡೆ,
ಕುಳಿತಲ್ಲೇ ಎದ್ದೆ;
ಸಾಷ್ಟಾಂಗ ಬಿದ್ದೆ

ಏಕೆಂದು ಗೊತ್ತಿಲ್ಲ:
ಸ್ತಬ್ಧವಾಯಿತು ಎಲ್ಲ,
ಆಚೀಚೆ ಇಣುಕಿದರೆ
ಇಲ್ಲ ಶಬ್ದ!

ಚಿಂತಾಮಣಿ ಸಭಾಹಿತ**,** ಮುಂಬಯಿ **9321004020**

## ಸಂಕ್ರಾಂತಿ

ಸಂಕ್ರಾಂತಿ ದಿನವಿಂದು
ಸಂತಸದಿ ಒಂದೆಂದು
ಎಳ್ಳು ಬೆಲ್ಲದ
ಸಿಹಿಯ ನೀಡುವೆನು

ಸಂತಸದಿ ನಲಿದಾಡಿ
ಅಂತರಾಳದಿ ಇಣುಕಿ
ಸಾಮರಸ್ಯದ ಮಹಿಮೆ ನೋಡು
ಅದಕ್ಕೊಂದು ಅರ್ಥ ನೀಡು
ನವನವೀನ ನವನವೀನ ನವನವೀನ

ಭ್ರಾಂತಿಗಳನೆಲ್ಲ ಬದಿಗೆ ದೂಡಿ
ಮೇಲು  ಕೀಳೆಂಬ  ಕಿರಿಕಿರಿಯ  ದೂರ್ ಮಾಡಿ
ಸರ್ವರೊಳು ಸಮಭಾವದಿಂ ಕೂಡಿ
ಸಾಗೋಣ
ಸಂಕ್ರಾಂತಿ ಸಂದೇಶ ಹಾಡಿ
ಶಿರವ ಮಣಿಸೋಣ ಸರ್ವೇಶನಲಿ  ಕೃಪೆ ಬೇಡಿ

ಶರಾವತಿ

ಅಂಬುತೀರ್ಥದಂದಗಾರ್ತಿ
ಇವಳು ನಮ್ಮ ಶರಾವತಿ
ಮೈಮರೆತು ಓಡುತಿಹಳು
ಶರಧಿ ಸೇರಲೆಂದು ಯುವತಿ

ಸಹ್ಯಾದ್ರಿಯ ಸೆರಗಿನಲ್ಲಿ
ಅಂಕು ಡೊಂಕು ದಾರಿಯಲ್ಲಿ
ನೋಡಲಿವಳ ಅಂದ ಚೆಂದ
ನೂರು ಕಣ್ಣು ಸಾಲದು

ಹೊಳೆವ ಹೊಳೆ ಹೊಳಪ ಕಂಡು
ಮಿಂಚುಬಳ್ಳಿ ಬೆಳಕ ಕಂಡು
ಓಡಬೇಡ ಚೆಲುವೆ ಎಂದು .
ನಮ್ಮ ನಾಡ ಬೆಳಗು ಎಂದು
ದೀಕ್ಷೆ ಕೊಟ್ಟು ನಡೆದು ಬಿಟ್ಟ
ನಾಡ ಶಿಲ್ಪಿ ವಿಶ್ವೇಶ್ವರ

ಹಸಿರ ಧರಿ ಜಲದ ಸಿರಿ .
ಜೋಗದಲ್ಲಿ ಬೀಳ್ವ ಪರಿ
ನೋಡಿದರೂ ಬಾರಿ ಬಾರಿ
ಹೊಚ್ಚ ಹೊಸತು ಪ್ರತೀಸಾರಿ

ಬೆಳ್ಳಿಯಂಥ ಬೆಳಕ ನೀಡಿ
ಯಂತ್ರ ತಂತ್ರ ಚಲನೆ ಮಾಡಿ
ಕರುನಾಡ ಸಿರಿಗೀತೆ ಹಾಡಿ
ಸಾಗರನ ಸೇರೋ ಮನೆ ಮಗಳು ನೋಡಿ
ಅಂಬುತೀರ್ಥದಂದಗಾರ್ತಿ ಇವಳು ನಮ್ಮ ಶರಾವತಿ
ಇವಳು ನಮ್ಮ ಶರಾವತಿ ಇವಳು ನಮ್ಮ ಶರಾವತಿ

ಬೆಂಗಳೂರಿಗೆ ಎಲ್ಲವೂ ಭಾರ

ಎಲ್ಲವೂ ಭಾರ
ಬೆಂಗಳೂರಿಗೆ ಎಲ್ಲವೂ ಭಾರ

ಕಟ್ಟಡಗಳು ..... ಭಾರ
ಮೇಲ್ಸೇತುವೆಗಳು ಭಾರ
ವಾಹನಗಳು ಭಾರ
ಉಗುಳುವ ಹೊಗೆಯೂ ಭಾರ

ಕೋಟಿ ದಾಟಿದ ಜನಗಳು ಭಾರ
ಕೋಟೆಯೊಳಗಿನ ಅಂದವು ಭಾರ
ತುಂಬಿ ತುಳುಕುವ ಶ್ರೀಮಂತಿಕೆ ಭಾರ

ಜೊತೆ ಜೊತೆ ಸಾಗುವ ...
ಬಡತನ ಭಾರ

ಐಟಿ ಕಂಪನಿ ಸಂಬಳ ಭಾರ
ಸಾಫ್ಟ್ ವೇರ್ ಹುಡುಗರ ತಲೆಯೂ ಭಾರ
ರಕ್ಕಸ ಕುಲದ ಶಕ್ತರೂ ಭಾರ
ಬದುಕಲು ಬಂದ ಅಶಕ್ತರು ಭಾರ

ಢಮ ಢಮ ಶಬ್ಧದ ಉದ್ದಿಮೆ ಭಾರ
ಬಡಕಲು ದೇಹದ ನೌಕರ ಭಾರ
ಸಾಹಿತ್ಯ ಸಂಸ್ಕೃತಿ ಕಾಳಗ ಭಾರ
ಬೀದಿ ಕಾಳಗ ರೌಡಿಯು ಭಾರ

ಊಟ ತಿಂಡಿ ಹೋಟೆಲ್ ಭಾರ
ನಶೆ ತುಂಬುವ ಬಾರ್ ಗಳು ಭಾರ
ಜಾಗಿಂಗ್ ವಾಕಿಂಗ್ ಜನರೂ ಭಾರ
ಜಿಮ್ ಬ್ಯೂಟಿ ಪಾರ್ಲರ್ ಭಾರ

ಆಶೆ ನಿರಾಶೆ ದುರಾಶೆಯು ಭಾರ
ಮೋಸ ವಂಚನೆ ಮೊದಲೇ ಭಾರ
ಅಧಿಕ ಅಧಿಕ ಅಧಿಕಾರವು ಭಾರ
ರಾಜಕಾರಣಿ ಕಾರಬಾರೂ ಭಾರ

ಸಾವಿರ ಸಾವಿರ ಭಾರದ ನಡುವೆ
ಬದುಕಲು ಒಂದ್ ಉದ್ಯೋಗವ ಕೊಡುವೆ
ಬೇಡ ಬದುಕಿಗೆ ಬೇರೆ ಗೊಡವೆ
ಬೆಂಗಳೂರಿಗೆ ಇದುವೇ ಬಂಗಾರದ ಒಡವೆ

ಒಂದು ಕಾಲದ ಹಳ್ಳಿ

ಜುಳು ಜುಳು ಹರಿವ
ಹಳ್ಳದ  ದನಿಯ ಕೂಡ
ತುಂಬಿ ಹರಿವ
ಪ್ರೀತಿ ಹೊಳೆಯ ಹಾಡ

ಮುಂಗಾರು  ಮಳೆಯಲ್ಲಿ
ಮಣ್ಣೀನ ಮುದ ನೋಡ
ಹಿಂಗಾರು ಇಳಿದಾಗ
ಬದುಕೀಗೆ…  ಜೀವ ಬಂದ್ಹಾಂಗ ನೋಡ

ಬಿಸಿಯ ರೊಟ್ಟಿಯ ಮ್ಯಾಲ
 ಹಸಿಯ ಮೆಣಸಿನ ಖಾರ
ಜೊತೆಗೆ ಗಾಣದೆಣ್ಣೆ ದರಬಾರ
ಮಳಿ ಛಳಿಗಿ ಅನಲಿಲ್ಲ ಮೈಭಾರ

ದಸರಾ ದೀವಳಿಗ್ಯಾಗ
ದೀಪದ ಸಿರಿ ನೋಡ
ಹೊಲಕ ಹೋದರೆ ಅಲ್ಲಿ
ಹಸಿರ ಪೈರಿನ ಹಾಡ

ಸಂಕ್ರಾಂತಿ ದಿನದಂದು
ಎಳ್ಳು ಬೆಲ್ಲದ ಮೆಲ್ಲ
ಯುಗಾದಿ ಸರಿದಾಗ
ಮಾವಿನ ಕಂಪಲ್ಲೆಲ್ಲ

ಕಟಿಯ ರೊಟ್ಟಿಯ ಮ್ಯಾಲ
ಕಾಳು ಪಲ್ಯದ ಜೋಡಿ
ಜೊತೆಗೆ   ಮೊಸರು ಮಜ್ಜಿಗೆ ಮೋಡಿ
ಬ್ಯಾಸಗಿ ದಾಹ…  ಹೊರಟ್ಹೋಯ್ತು ಓಡಿ

ಬಿಸಿಲು ಬೆವರಲಿ ದುಡಿದು
ಮರದ ನೆರಳಲಿ ಕುಳಿತು
ಮುಗಿಲ ಕಡೆಗೆ ದೃಷ್ಠಿ
ಕಂಡು ಕರುಣೆ ತೋರಿದ ಸೃಷ್ಠಿ
ತಂತು ನೀರ ತುಂಬಿದ ಮೋಡ
ಮತ್ತೆ ಮುಂಗಾರಿನ ಹಾಡ  ।

ಜುಳು ಜುಳು ಹರಿವ
ಹಳ್ಳದ ದನಿಯ ಕೂಡ
ತುಂಬಿ ಹರಿವ…
ಪ್ರೀತಿ ಹೊಳೆಯ ಹಾಡ
ಬದುಕು ಬವಣೆ ಜೀವ ಜಾಲದ ಪಾಡ
ಬಡಿವಾರ ಇಲ್ಲದ ಬದುಕೀನ ಹಾಡ

## ಋಣಭಾರ

ಋಣಭಾರ ಋಣಭಾರ
ಬಲುಭಾರ ಋಣಭಾರ
ಹಲವು ಋಣದಲಿ
ಇಂದು
ಬದುಕಿರುವೆನು ನಾನು
ಭರಿಸಲಾಗದ ಭಾರ ಈ ಋಣಭಾರ

ಹುಟ್ಟುವ ಮುಂಚೆ
ತಾಯ್ ಉದರ ಋಣಭಾರ
ಹುಟ್ಟುತಲೆ
ತಾಯ ಎದೆಹಾಲ ಋಣಭಾರ
ಬೆಳೆದಂತೆ
ತಂದೆಯ ಬೆವರಿನ ಋಣಭಾರ
ಮತ್ತೆ

ಒಡಹುಟ್ಟು ಸಂಬಂಧಿಕರ ಋಣಭಾರ
ನನ ಭಾರ ಹೊತ್ತ
ಭೂತಾಯಿ ಋಣಭಾರ

ವರುಷ ನಾಲ್ಕರ ಮುಂದೆ
ಅಕ್ಷರ ಗುರುವಿನ ಋಣಭಾರ
ಮತ್ತೆ ಸಹಪಾಠಿಗಳ
ಸಾಂಗತ್ಯ ಋಣಭಾರ
ಹಾರೈಸಿ
ಹರಕೆ ನೀಡಿದವರ ಋಣಭಾರ
ಸಂಭ್ರಮ ತಂದ
ಸೌಂದರ್ಯದ ಋಣಭಾರ

ದುಡಿಮೆಗೆ ದಾರಿ ತೋರಿದ ದೊರೆಯ ಋಣಭಾರ
ಅನ್ನ ಆರೋಗ್ಯ ನೀಡಿದ …ನಿಸರ್ಗದ ಋಣಭಾರ
ಆರೈಕೆ ಮಾಡಿದ ವೈದ್ಯರ ಋಣಭಾರ
ಸಂತಸ ಸಲುಗೆಯ ಸ್ನೇಹಿತರ ಋಣಭಾರ
ಸಂಸಾರದಲಿ ಸರಿಗಮ ಹಾಡಿದವಳ ಋಣಭಾರ

ಹೇಗೆ ತೀರಿಸುವೆನೋ ಕಾಣೆ
ಇಷ್ಟೊಂದು ಋಣಭಾರ
ಕೊಂಚವಾದರೂ …..
ಕಡಿಮೆಗೊಳಿಸುವ ಪರಿಯ

ಯುಕ್ತಿಯ ಕೊಡು ದೇವ
ಶಕ್ತಿಯ ಕೊಡು
ಸಂಯಮವ ಕೊಡು
ಸಂವೇದನೆಯ ಕೊಡು

ಹಿಂದು ಮುಂದಿರುವವರೆಲ್ಲ
ಹಿತವಗೈದವರೆಲ್ಲ
ಧರೆಗಿಳಿದ ದೇವರ ಪ್ರತಿರೂಪವೆಂದು
ಭಾವಿಸಿ ಬದುಕುವ ಭಾವನೆಯ ಕೊಡು
ಸಮತೆ ಮಮತೆ ಸದ್ಗುಣಗಳನೇ ...
ಅನವರತ ನೀಡು

ಸಿದ್ದಣ್ಣ ಸೊನ್ನದ **9731768973**

ಕನ್ನಡ ಕರ್ನಾಟಕ ಕನ್ನಡಿಗರು **(ಕಕಾರಕಥನ)**

ಕನ್ನಡ ಕಟ್ಟುವ ಕೆಲಸ ಕಷ್ಟ, ಕರ್ನಾಟಕದ
ಕನ್ನಡಿಗರು ಕಂಕಣ ಕಟ್ಟಬೇಕು, ಕರುನಾಡ
ಕೆಚ್ಚೆದೆಯ ಕಲಿಗಳ ಕಂಡಿದೆ. ಕಸ್ತೂರಿ ಕಂಪು
ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ ಕಂಗೊಳಿಸಲಿ.
ಕಾದಾಡುವುದನ್ನು ಕಟ್ಟಿಟ್ಟು ಕಾರ್ಯ ಕೈಗೊಳ್ಳಬೇಕು.
ಕೂಸು ಕಾಗುಣಿತ ಕಲಿತರೆ ಕಳೆಯದು ಕನ್ನಡತನ
ಕಡೆತನಕ ಕಾರ್ಯವಾಸಿ ಕತ್ತೆ ಕಾಲು ಕಟ್ಟದೆ
ಕಟಿಬದ್ಧರಾದಾಗ ಕನಸು ಕೈಗೂಡುವುದು ಕ್ಷುಲ್ಲಕ
ಕಾರಣಕ್ಕೆ ಕಾದಾಡದಿರುವುದೇ ಕ್ಷೇಮ.
ಕ್ರಿಶ್ಚಿಯನ್ನರಾಗಲಿ, ಕುರಾನಿನವರಾಗಲಿ
ಕೈಕುಲುಕಬೇಕು, ಕುಲಕುಲವೆಂದು
ಕಾಲೆಳೆಯಬಾರದು.
ಕಾರ್ಮಿಕರಿಗೆ, ಕಾರಕೂನರಿಗೆ, ಕೃಷಿಕರಿಗೆ, ಕವಿಗಳಿಗೆ,
ಕಥೆಗಾರರಿಗೆ, ಕಾವ್ಯಾಸಕ್ತರಿಗೆ ಕನ್ನಡ ಕುಲ ಕೋಟಿಗೆ,
ಕಳಕಳಿಯಿರಬೇಕು, ಕಾಳಜಿಯಿರಬೇಕು.
ಕಾಸರಗೋಡು ಕೇರಳಕ್ಕಾಗಿದೆ, ಕಾವೇರಿಯನ್ನು ಕಾಯ್ದುಕೊಳ್ಳಬೇಕು,
ಕೋಲಾಗಳನ್ನು ಕಡೆಗಣಿಸಬೇಕು.
ಕ್ರೂರರ ಕಪಿಮುಷ್ಟಿಯಿಂದ ಕನ್ನಡತಿಯನ್ನು ಕಾಪಾಡಬೇಕು.
ಕುಪ್ಪಳ್ಳಿಯ ಕುವೆಂಪು, ಕಾಗಿನೆಲೆಯ ಕನಕದಾಸ
ಕಾರಂತರು, ಕಾರ್ನಾಡರು, ಕಂಬಾರ,
ಕುಮಾರವ್ಯಾಸ, ಕಿತ್ತೂರು ಚೆನ್ನಮ್ಮ, ಕಾರ್ಯಪ್ಪ,
ಕೆಂಪೇಗೌಡ, ಕೃಷ್ಣದೇವರಾಯ,
ಕೋಳೂರು ಕೊಡಗೂಸು,
ಕೈಲಾಸಂ ಕತೆಗಳನ್ನು, ಕಂದಮ್ಮಗಳಿಗೆ ಕೇಳಿಸಬೇಕು
ಕಟ್ಟಕಡೆಯದಾಗಿ ಕೇಳಿಕೊಳ್ಳುವುದೇನೆಂದರೆ,
ಕೆಟ್ಟದಾಗಿ ಕಾಲ ಕಳೆಯದೆ
ಕಾಯಕದಲ್ಲಿ ಕೈಲಾಸ ಕಂಡರಾಯಿತು.
ಕಾಲ ಕರೆದಾಗ ಕಣ್ಮುಚ್ಚಿದರಾಯಿತು.
(ಕತವ್ಯವೇ ಕರ್ತಾರ ಕಾಣ)

ಕೊಪ್ಪರಂ ಅನ್ನಪೂರ್ಣ **9845847911**

ಬಿಂಕ ಬಿಡು

ಬಿಂಕವೇತಕೋ ಮನುಜ ಬಿಂಕವೇತಕೋ ಬತ್ತು
ಬಾಡಿ ಬಡಕಲಾಗಿ ಭಸ್ಮವಾಗುವ ದೇಹಕೆ

ಬಣ್ಣದ ಮಾತನಾಡುತ್ತಾ
ಬಿಕರಿ ಮಾಡುತ್ತಾ ಕಂಡವರ ಹೀಯಾಳಿಸುತ್ತ
ಕಾಲ ಕಳೆಯುತ್ತಾ

ಕಂಡದ್ದೆಲ್ಲಾ ಬಯಸುತ್ತಾ ಬಿನ್ನಾಣ ಮಾಡುತ್ತಾ
ಇತರರ ವಂಚಿಸುತ್ತಾ ಬದುಕು ಕಳೆಯುತ್ತಾ

ಸೌಂದರ್ಯ ಇಚ್ಛೆ ಪಡುತ್ತಾ ಆಯಸ್ಸು ಬೇಡುತ್ತಾ
ಅನ್ಯರಿಗೆ ಹೊಲಸನಾಡುತ್ತಾ ವೃಜಿನದಲಿ  ಕಳೆಯುತ್ತಾ

ಒಡೆತನ ಅನುಭವಿಸುತ್ತಾ ದಬ್ಬಾಳಿಕೆ ಎಸಗುತ್ತಾ
ಪ್ರಜೆಗಳಿಗೆ ಹಿಂಸಿಸುತ್ತಾ ಅಮರನಾನೆನುತಾ

ಬಿಂಕಬಿಟ್ಟು ಹರಿಯ ನೆನೆಯುತ್ತಾ ಮುಕ್ತಿ ಬೇಡುತ್ತಾ
ನರಸಿಂಹ ವೆಂಕಟನ ಸಂಗವ ಬಯಸುವ ಮನುಜ

ಮುಕ್ತಿ ನೀಡುವ ಭಾರ ನಿನ್ನದೋ ನರಸಿಂಹ

ಬಾರೋ ನರಸಿಂಹ ಬಾರೋ ನರಸಿಂಹ ನೀ ಬಾರೋ
ಈ ಪಾಮರನ ಮೊರೆಯ ಮನ್ನಿಸಿ ಬಾ ನರ ಸಿಂಹ

ಪ್ರಹ್ಲಾದನ ಎದುರು ತೂಗು ನೋಡದಿರು ನರಸಿಂಹ
ಎನ್ನಾತ್ಮದಲ್ಲಿ ಅನ್ಯ ದೈವವ ನೀ ಕಾಣೆ ನರಸಿಂಹ

ಘೋರ ಅಸುರ ಕಶ್ಯಪುವಿಗೆ
ಖಣಾತ್ಮಕ ಕಶ್ಯಪುವಿಗೆ ಮೋಕ್ಷವಿತ್ತೆ ನರಸಿಂಹ
ತೋರು ಎನ್ನೆಡೆಗೆ ಕರುಣೆ ಭಿಕ್ಷೆಯಿತ್ತು ನರಸಿಂಹ

ಅಂಬರೀಶನ ವ್ರತಗೈದವನಲ್ಲ ನಾನು ನರಸಿಂಹ
ಎನಗಿತ್ತ ಪ್ರತಿ ಅಗುಳು ನಿನ್ನ ನೈವೇದ್ಯವು ನರಸಿಂಹ
ಧ್ರುವನ ತಪಸ್ಸು ಮಾಡಲು ಶಕ್ತನಲ್ಲ ನಾನು ನರಸಿಂಹ
ದಿನ ರಾತ್ರಿ ಎನ್ನ ಉಸಿರಿನಲ್ಲಿ ನಿನ್ನ ನಾಮವೇ ನರಸಿಂಹ

ಪುಂಡರೀಕನ ಸೇವೆಯ ಇಚ್ಛಿಸದಿರು ನರಸಿಂಹ
ನಿನ್ನ ದಾಸ್ಯ ಅಗಣಿತವಾಗಿ ಎನ್ನೊಳಿರಿಸು ನರಸಿಂಹ
ನಾರದರ ನಾದ ಕೀರ್ತನೆ ಬಯಸದಿರು ನರಸಿಂಹ
ಎನ್ನ ದೇಹ ತಂಬೂರಿಯಾಗಿ ನಿನ್ನ ನಾಮ . ಝೆಂಕರಿಸಿ ನರಸಿಂಹ

ನಿನ್ನ ಮಹಿಮೆ ವರ್ಣಿಸುವ ದಾಸವರೇಣ್ಯ ನಲ್ಲವೋ ನರಸಿಂಹ
ಎನ್ನ ಒಳಗಣ್ಣಲಿ ನಿನ್ನ ಚರಣ ಚಿತ್ರಿಸಿರುವ ನರಸಿಂಹ
ಈ ಸುಖವೇ ಜನ್ಮ ಜನ್ಮಕ್ಕೂ ನೀಡೆನಗೆ ನರಸಿಂಹ
ಕಡೆಹಾಯಿಸಿ ಮುಕ್ತಿ ನೀಡುವ ಭಾರ ನಿನ್ನದೋ ನರಸಿಂಹ ವೆಂಕಟ

ನನ್ನ ಸಲಹೋ ರಂಗ

ಎನ್ನ ಬಿಟ್ಟು ಪೋಗದಿರೋ ರಂಗ
ನೀ ಬಿಟ್ಟು ಪೋದರೆ ಕಾಯುವವರಾರೋ ಕೃಷ್ಣ

ಎಂಭತ್ತು ನಾಲ್ಕು ಲಕ್ಷ ಯೋನಿಗಳಲಿ ಹಾದು ತಂದೆ
ಕಣ್ಣಿದ್ದು ಕುರುಡನಾಗಿ ಮುಗ್ಗರಿಸಿ ದಾರಿಯ ಕಾಣದೆ
ಅಹಂಕಾರದ ತುದಿಯಲಿ ನಿಂತು ಪಾಪಗಳ ಮಾಡಿದೆ
ಭವರೋಗಗಳು ಎನ್ನ ಬವಣಿಸಿ ಕರ್ಮ ಹೆಚ್ಚಿಸಿದೆ

ಮಾಯಾಂಗನೆಯರ ಮೋಹಕ್ಕೆ ಮರುಳಾಗಿ ಮದಡನಾದೆ
ಭಂಡತನದಲಿ ಬಂಧು ಬಾಂಧವರ ಬಾಂಧವ್ಯ ಬಡಿದೆ
ರೊಕ್ಕಗಳಿಸುವ ರಂಪಣಿಗೆ ರತಿಸಿ ರಹದಾರಿ ಬಿಟ್ಟು ನಡೆದೆ
ದೋಷವೆಂಬ ಗೋಡೆಯ ದಮನ ಮಾಡದೆ ನಿಂದೆ
ಈ ಪ್ರಾರಬ್ಧ ಕರ್ಮಗಳು ಸಂಚಿತವಾಗಿ ಸುಡುತಿದೆ ರಂಗ
ನೀ ಉಪೇಕ್ಷೆ ಮಾಡಿದರೆ ಗತಿ ಯಾರೋ ಎನಗೆ ಕೃಷ್ಣ
ಬ್ರಹ್ಮ ಬರೆದಿಹನೆಂದು ಕೈ ಬಿಡದಿರು ನರಸಿಂಹ ವೆಂಕಟ
ವಿಧಾತನ ಬರಹವನೆ ಅಳಿಸುವ ನಿನ್ನ ನಾಮ ಎನಗಿರಲಿ

ಸಾರ್ಥಕ್ಯ

ತಂದೆ, ತಾಯಿ ಸೇವೆ ಅರಿಯದವ ಸಂಸರ್ಗ ಬಯಸಿದರೇನು
ದಾನವನರಿಯದವ ಧನಿಕನಾದರೇನು,
ದಯೆ ಅರಿಯದವ ದೊರೆಯಾದರೇನು,
ಆಚಾರ ಸದ್ವಿಚಾರ ಅರಿಯದವ ಮನುಷ್ಯನಾದರೇನು
ದೈಹಿಕಶುದ್ಧಿ ಹಿತ ಚಿಂತನೆ ಅರಿಯದವ
ನರಸಿಂಹ ವೆಂಕಟನ ಒಲುಮೆ ಇಲ್ಲವೆಂದು ದುಃಖಿಸಿದರೇನು

ಎಂ ಎಸ್ ವೆಂಕಟೇಶ **9448639374**

ಮೆರೆದು ಮರೆಯಾದವರು

ಅಮ್ಮಾ ತಾಯಿ ಭಿಕ್ಷೆ ನೀಡಮ್ಮಾ
ಅಪ್ಪ- ಅಮ್ಮನ ಸಾಕಬೇಕಮ್ಮಾ
ಅಕ್ಕ- ತಮ್ಮನ ಓದಿಸಬೇಕಮ್ಮಾ
ರಾಗಬದ್ಧದಿ ಇಂಪು ಕಂಠದಿ ಹಾಡುವ
ಆಸೆಗಣ್ಣಿನ ಹರಕು ಚಡ್ಡಿಯ ಆ ಪುಟ್ಟ ಹುಡುಗ ||

ತಾಳ-ತಂತಿ ಸೇರಿಸಿದರೆ ಗಾನವಾದಿತು
ಸ್ವರ- ಮೇಳ ಜೊತೆಯಾದರೆ ಕೋಗಿಲೆಯೂ ನಾಚೀತು |
ಎಂದರಿತು ಅವನನ್ನು ಕರೆತಂದರೊಬ್ಬರು
ಹರುಕು ಚಡ್ಡಿ ಮೂಲೆ ಸೇರಿ, ನವನಾಮದೊಂದಿಗೆ
ಹೊಸ ಉಡುಗೆ- ಮೇಲ್ತೊಡುಗೆ, ಗರಿ ಗೆದರಿ ನವೋಲ್ಲಾಸ ||

ಆರಂಭವಾಯ್ತು ಸಂಗೀತ ಪಾಠ, ಗುರು- ಮೇಳದೊಂದಿಗೆ
ದಿನವುರುಳಿ ಬೆಳೆದು ಶಿಖರವೇರಿತು ಸಂಗೀತ ಸಾಧನೆ |
ಹಾಡು ಕೇಳದವರಿಲ್ಲ| ಚಪ್ಪಾಳೆ ತಟ್ಟದವರಿಲ್ಲ|
ಗಾನದ ಇಂಪನ್ನು ಮೆಲಕು ಹಾಕದವರಿಲ್ಲ|
ಮನೆ ಮಂದಿಯೆಲ್ಲಾ ಹಾಡಿನಿಂಪಿಗೆ ತಲೆದೂಗಿದರಲ್ಲಾ||

ಹಾರ ತುರಾಯಿ ಸನ್ಮಾನ ಅನುದಿನವೂ

ಹೆಸರಾಯ್ತು, ಮನೆಯಾಯ್ತು ಮಹಡಿಯಾಯ್ತು
ಹಣದ ಹೊಳೆಹರಿದು ಹಳೆಯದೆಲ್ಲಾ ತೊಳೆದೋಯ್ತು
ಹೊಗಳು ಭಟರ ವ್ಯೂಹದಲ್ಲಿ, ಬೀಳಿಸಲಾಯ್ತು ಬೆಳೆಸಿದವರ
ಮೆರವ ಭಾವದಲಿ ಮರೆಸಿ ಬಿಟ್ಟಿತು ಏರಿ ಬಂದ ಮೆಟ್ಟಿಲುಗಳ |

ಬದಲಾದಂತೆ ಕಾಲ, ಮೇಲೇರಿತು ಹೊಸ ಪ್ರತಿಭೆಯೊಂದು
ಕಳೆಗುಂದಿದಂತಾಯ್ತು ಹಳೆತನದ ಈ ಗಾನದ ಇಂಪು
ಕರಗಿದಂತೆಲ್ಲಾ ಬೇಡಿಕೆ -ಸಂಪತ್ತುಗಳು ಇಳಿ ಹೊತ್ತಿನಂತೆ
ಮಂಕಾಯಿತು ಕೀರ್ತಿ, ಮೆಚ್ಚುಗೆಯ ಒಂದೊಂದೇ ಮೆಟ್ಟಿಲುಗಳು
ಇಳಿದಂತೆ ಅಲ್ಲ, ಜಾರಿದಂತೆ ನೋವಾಯ್ತು ಮತ್ತೆ ಏರಲಾಗದಂತೆ ॥

ಏರಿ ಏರಿದ್ದ ಏಣಿ ಇಳಿವಾಗ ಇಲ್ಲದೇ
ಬದುಕಿನಾಸರೆಯೇ ತಂಪಿಸಿ ನೆಲ ತೋರಿಸಿತು ।
ದೂರಾದ ಬೆಳೆಸಿದಾತರು, ಮರೆಯಾದ ಬಂಧುಗಳು
ಮತ್ತದೇ ಓಣಿ, ಬತ್ತಿದಾ ಮುಖ, ಕೀರಲು ಧ್ವನಿ,
ಅಮ್ಮಾ ಭಿಕ್ಷೆ ನೀಡಮ್ಮಾ । ನಾನೀಗ ಬದುಕಬೇಕಮ್ಮಾ॥

## ಇನ್ನೂ ಸಿಕ್ಕಿಲ್ಲ

ಕೂಡು ದಾರಿಯ ವರ್ತುಲದಲ್ಲಿ
ಧೂಳು ತಿನ್ನುತ್ತಾ ನಿಂತಿದ್ದಾನೆ ಆ ಮುದುಕ।
ಅದ್ಯಾರನ್ನೋ ಹುಡುಕುತ್ತಿರುವಂತಿದೆ
ಕೈಯಲ್ಲಿ ಕೋಲು ಹಿಡಿದ ಅವನ ನೋಟ॥

ಅದೆಷ್ಟೋ ದಿನದಿಂದ ನಿಂತೇ ಇದ್ದರೂ
ಅವನ ಕಾಲುಗಳ ಬಲ ಒಂದಿಷ್ಟೂ ಕುಂದಿಲ್ಲ।
ಉರಿ ಬಿಸಿಲು ಸುಡುತ್ತಿದ್ದರೂ, ಬೋಳು
ತಲೆಯ ಮೈಯಲ್ಲಿ ಬೆವರೆಂದೂ ಇಳಿದಿಲ್ಲ॥

ಜಡಿ ಮಳೆಗೆ ಮೈ ತೋಯುತ್ತಿದ್ದರೂ
ಅವನಿಗೆಂದೂ ನೆಗಡಿ ಬಂದಿಲ್ಲ।
ಗಡಗಡ ನಡುಗಿಸುವ ಚಳಿಗೂ

ಮೋಟು ಪಂಚೆಯ ಮೈ ಎಂದಿಗೂ ಕುಂದಿಲ್ಲ ll

ನಿಂತಲ್ಲೇ ನಿಂತರೂ ನಿಂತಿಲ್ಲ ಹುಡುಕಾಟ
ಬರು -ಹೋಗುವವರನ್ನೆಲ್ಲಾ ನೋಡುತ್ತಾ ಎವೆಯಿಕ್ಕದೇ l
ಸಂಕ್ರಾಂತಿ ಎಪ್ಪತ್ತಾರು ಕಳೆದರೂ ನಿಂತಿಲ್ಲ ಚಿಂತೆ
ತನ್ನಂತಹ ಮಹಾತ್ಮರು ಇಂದಿಗೂ ಸಿಕ್ಕಿಲ್ಲವಂತೆ

ಹೊಸ ವರ್ಷ

ಇಂದು ಉದಯಿಸಿದ ರವಿ  ನಿನ್ನೆಯಂತೆಯೇ,
ನಿನ್ನೆಯಂತೆಯೇ ಇಂದೂ ಹೊರಟೆ ವಾಯುವಿಹಾರಕೆ,
ದಾರಿಯುದ್ದಕ್ಕೂ ಸಿಕ್ಕರು ದೋಸ್ತರೆಲ್ಲಾ ಎಂದಿನಂತೆ
ಆದರೂ ಕೈ ಕುಲುಕಿದರು, ಇಂದು ಹೊಸ ವರ್ಷವಂತೆll

ನಿನ್ನೆಯಂತೆಯೇ ಇತ್ತು ಚಳಿಯಲ್ಲಿಯೂ ಮಂಜು,
ಎಂದಿನಂತೆಯೇ ಅರಳಿತ್ತು ಮಲ್ಲಿಗೆ- ದಾಸವಾಳ,
ನಿತ್ಯದಂತೆಯೇ ಇಂದೂ ಅಂಗಳದಿ ರಂಗೋಲಿ,
ಚುಕ್ಕೆಯಲ್ಲರಳಿಸಿದ್ದಳು ಮಡದಿ ಹೊಸ ವರ್ಷಕ್ಕೆ ಸ್ವಾಗತ ll

ನಿನ್ನೆಯಂತೆಯೇ ಬಂದಾಯಿತು ನೀರಿನ ನಲ್ಲಿ ,
ಪಕ್ಕದಜ್ಜ ಕ್ಯಾಕರಿಸಿ ಉಗುಳುವುದೂ ಎಂದಿನಂತಿತ್ತು,
ಹಾಲಿನವನೂ ತಡವಾಗಿಯೇ ಬಂದ ಯಾವಾಗಿನಂತೆ,
ಆದರೂ ಮಗಳ ಉಲಿತ ಹೊಸ ವರ್ಷದ ಶುಭಾಶಯll

ರಿಪೇರಿ ಕಂಡಿಲ್ಲ ವರ್ಷದಿಂದಲೂ ಹೊಂಡದಲ್ಲಿಯ ರಸ್ತೆ,
ಸ್ವಚ್ಛವೇನೂ ಆಗಿಲ್ಲ, ಎಂದಿನಂತೆಯೇ ನಾರುತ್ತಿದೆ ಮಾರ್ಕೆಟ್ಟಿನ ತಿಪ್ಪೆ,
ಬದಲಾಗಿಲ್ಲ ಕಛೇರಿಗಳಲ್ಲಿ ಹಾಸು ಹೊಕ್ಕಾದ ಲಂಚದ ಅವಸ್ಥೆ ,
ಆದರೂ ಇಂದೇನೋ ಎಲ್ಲರಲಿ ಹೊಸ ವರ್ಷದ ಹೊಸತನದ ಭಾವll

ಉರಿ ಬಿಸಿಲ ಸೆಖೆ ಬೇಸಿಗೆಯನ್ನೇ ಬೇಯಿಸಿ
ಮುಂದೆ ಮಳೆಯಬ್ಬರ, ಬಿಸಲೇ ಕಾಣದ ಚಳಿಗಾಳಿ,
ಹಗರಣ  ಭ್ರಷ್ಟಾಚಾರಗಳ ಭರಪೂರ ಕೊಡುಗೆ
ಜೊತೆಗೆ ಶೂನ್ಯಾಭಿವೃದ್ಧಿಯ ವರ್ಷವೀಗ ಕಳೆದಾಯ್ತು. ll

ಆದರೂ ಕಾಯುತಿದೆ ಕಾತರದಿ ಈ ಜಗ
ಸಾಕಾರವಾಗದೆ ಉಳಿದ ಕನಸುಗಳ ಮತ್ತೆ ಬಿತ್ತಲು,
ಬೇಸರಿಸದೇ ಮರಳಿ ಯತ್ನಕ್ಕೆ ಗುರಿ ಸೇರುವತ್ತ
ಹೊಸ ನಿರೀಕ್ಷೆಯಲಿ, ಹೊಸತನದಿ ಬರಲೆಂದು ಹೊಸ ವರ್ಷll

ಜಿ ಪಿ ನಾಗರಾಜ **9448866627**

## ಅನಂತದೆಡೆಗೆ

ಎಲ್ಲೋ ಕರೆಯಿತು, ಏನೋ ನುಡಿಯಿತು,
ಹೃದಯ- ಹೃದಯಗಳ ಬಂಧನ ಬಿಡಿಸಲಿಕೆ
ಬಾಳನು ಮರೆಸಿತು, ಹಾದಿಯ ತೋರಿತು
ಎಂದೂ ಇಲ್ಲದ ಈ ಜ್ಞಾನಸಂಪದಕೆ.||

ಹಕ್ಕಿಯ ಜೀವದ, ಗರ್ವದ ರೆಕ್ಕೆಯ
ಮುರಿಯುತ ಭರದಿ ಮುಂದೆ ಸಾಗಿದೆ
ಕ್ಷಣಿಕ ಬದುಕಿಗೆ ನೀ ದಾನವನೆನಿಸದೆ
ಸದ್ಗುಣ -ಸನ್ಮಾರ್ಗಕೆ ಎಂದಿಗೂ ತಲೆಬಾಗು||

ಸಾವೇ ಇಲ್ಲದ, ನೋವು ಇಲ್ಲದ
ಮಾಯಾ-ಮೋಹವ ಬಿಡಿಸಲಿಕೆ
ಚಿಂತೆಯ ಕಳೆಯಿಸಿ ಮೋಕ್ಷವ ನೀಡಿತು
ಜ್ಞಾನ ನಿಧಿಯ ಈ ಮಹಾಚೇತನವು||

## ಸಮರ್ಪಣೆ

ಹಾಡಲೇ, ನಾ ನಿನ್ನ ಕಾಡಲೇ
ಹಾಡಲೇ, ನಾ ನಿನ್ನ ಬೇಡಲೆ

ಏನೆಂದು ನಾ ಕೇಳಲೇ??
ನಾನು ನಿನ್ನೊಡನೆ ಮೌನಿ ಯತಿರೂಪ ತಾಳಲೇ!!
ನುಡಿಮುತ್ತುಗಳು ನಿನಗೆ ಭಾರವೇ?
ನಿನ್ನ ಸವಿಕಂಠ ದಾನಕೆ ಕೊರತೆಯೆ!
ನಿನ್ನ ಚೆಲುವಿನ ಮಾಟ, ನಿನ್ನೊಲವಿನ ನೋಟ
ನಿನ್ನ ಮನಸ್ಸಿನ ಬೇಟೆ ಎನಗರಿವಾಗದು
ನನಗಿಂದು ತಿಳಿಯದು||

ದುಂಬಿಯ ಗಾನ ಹೂವಿಗೆ ಅಸ್ಪೃಶ್ಯವೇ?
ಸುಮಧುರ ಕೋಗಿಲೆಗೆ ಮಾಮರವು ವಿಷವೃಕ್ಷವೇ!
ಜೀವ ಉಳಿಸುವ ಕಡಲು, ಸತಿಯ ಪ್ರಾಣದ ಒಡಲು
ತನ್ನಿನಿಯನಿಗೆ ಹಾತೊರೆಯದೆ?
ತ್ಯಾಗಗೈದು ಸಮರ್ಪಿಸದೇ?

## ಹೀಗೇಕೆ ಮಾಡಿದಿರಿ

ಒಲಿದು, ಬೆರೆತು ಕೈಹಿಡಿದಿರುವ ಸತಿಯು
ಪತಿಯ ಬರುವಿಕೆಗಾಗಿ ಹಗಲಿರುಳೂ
ತವಕದಲಿ ಕಾತರದಿ ಕಾಯುತಿಹುಳು.
ಆದರೇಕೆ ಪತಿರಾಯರು
ಮನೆಗೆ ಹಿಂದಿರುಗದೆ ಹೀಗೇಕೆ ಮಾಡಿದಿರಿ?

ಗೃಹಿಣಿ ಇಲ್ಲದಾ ಗೃಹವು
ತುಚ್ಛವೆಂದು, ಮುಳ್ಳೆ0ದು
ಹೃದಯ ಶೂನ್ಯವೆಂದು ತಾವೇ ಹೇಳಿಕೊಂಡವರು
ಇನ್ನೂ ಬಾರದೆ ಹೀಗೇಕೆ ಮಾಡಿದಿರಿ?

ಬಡತನದ ಹೆಣ್ಣೆಂದು
ಮೋಹಿಸಿ ಬಂದವರು
ಹೃದಯದಲಿ ಸಿರಿತನವು ತುಂಬಿಹುದು ಎಂದವರು
ಹೃದಯ ದೇವಿಯು ತನ್ನ ಹುಟ್ಟು -ಹಬ್ಬದಿ
ವಸ್ತ್ರವನು ಕೇಳಿದಾಗ ನಿಮ್ಮಪ್ಪನ ಮನೆಯವರು
ಸಿರಿವಂತರೇ? ಎಂದು ಜರೆದು
ಹೀಗೇಕೆ ಮಾಡಿದಿರಿ?

ಚಿನ್ನ ಮುದ್ದು ಎಂದವರು
ಬರಿಯ ಮಾತಿನಲಿ ಚಿನ್ನದ
ಮಣಿಗಳನು ಪೋಣಿಸಿ ಸರ ಮಾಡಿಸಿದವರು
ತಾವು ವೈಢೂರ್ಯದುಂಗುರವನ್ನು
ಧರಿಸಿರುವ ಜಾಣರು, ಹೀಗೇಕೆ ಮಾಡಿದಿರಿ?

ಅಂಬುಜಾಕ್ಷಿ ಬೀರೇಶ **9741011615**

ಜನಶಕ್ತಿ

ಮೀರಿ ಹೋಯಿತು ಭಾರತದ ಜನಸಂಖ್ಯೆ ನೂರು ಕೋಟಿ
ಇದರಲ್ಲಿಲ್ಲ ಇನ್ನೂ ಯಾವುದೇ ದೇಶ ನಮಗೆ ಸರಿಸಾಟಿ
ರಾಜಕಾರಣಿಗಳು ಮಾಡುವರು ಲೂಟಿ ಕೋಟಿ ಕೋಟಿ
ಅಯ್ಯೋ ಒಲಂಪಿಕ್ಸ್ ನಲ್ಲಿ ಮಾತ್ರ ನಮದಿಲ್ಲ ಪೈಪೋಟಿ

ಸ್ವಾತಂತ್ರ್ಯ ಮಹಾತ್ಮೆ

ಭಾರತಕ್ಕೆ ಸ್ವಾತಂತ್ರ್ಯವನ್ನು ತಂದು ಕೊಟ್ಟರು ಮಹಾತ್ಮ ಗಾಂಧಿ
ರಾಜಕಾರಣಿಗಳು ಹಂಚಿದರು, ನಾಡಿನ ಜನಕೆಲ್ಲ ಸಿಹಿ ಬೂಂದಿ
ಕಡೆ ಕಡೆಗೆ ಮತ ಯಾಚಿಸಲು ಹಂಚಿದರು ಸೇಂದಿ ಬ್ರಾಂದಿ
ಈಗ ದಿಕ್ಕು ಕಾಣದೆ ಹಲ್ಲು ಗಿಂಜಿದರು, ಬಂದು ನಿಂತಿಹರು ನಕಲಿ ಗಾಂಧಿ.

ಅಪ್ಪ ಅಮ್ಮ ದೇವರು

ತಿರುಪತಿಗೆ ಹೋಗಿ ಕೋಟಿ ಕೊಟ್ರೂ ಮಾತಾಡ್ಸೊಲ್ಲ ತಿಮ್ಮಪ್ಪ
ನಾನ್ ಊರ್ ಗೋಗಿ ನಾನ್  ನೂರ್  ಕೊಟ್ರೆ ಮಾತ್ನಿಲ್ಸೊಲ್ಲ ನಮ್ಮಪ್ಪ
ಊರ್ ಗೂರೇ  ಬಸ್ಮ ಆದ್ರೂ ಮಿಸ್ ಕಾಡೋಲ್ಲ ಮಾರಮ್ಮ
ಆ ಹಳ್ಳಿ ಹೈದನ ಕಾಲ್ಗೇಟಾದ್ರೆ
ಗೋಳಾಡ್ತಾಳೆ ನಮ್ಮಮ್ಮ

ದಲಿತರಿಗೆ ಕರೆ

ಕಲಿತಮೇಲೆ ದಲಿತನಲ್ಲ
ಬಲಿತ ಮೇಲೆ ದಲಿತನಲ್ಲ
ಕಲಿತು, ಬಲಿತು, ದಲಿತನೆಂಬ ಪದವ ಮರೆತು

ನಲಿದು ಬಾಳು ಎಲ್ಲರೊಡನೆ ನೀನು ಬೆರೆತು
ಬಿಡು ನಿನ್ನ ಹಳೆಯ ರಾಗ
ಸುಡು ನಿನ್ನ ಹಳೆಯ ಜಾಗ
ಕೂಡು ದೊಡ್ಡ ಜನರ ಬೇಗ
ನೋಡು ನಿನ್ನವಳ ಆಗ

**ಪುಟ್ಟಪ್ಪ.**
ಓ ವರಕವಿ ಕೆ.ವಿ.ಪುಟ್ಟಪ್ಪ.
ಈ ನಾಡಲೆ ಮರಳಿ ಹುಟ್ಟಪ್ಪ.
ನೀ ಮನೆ,ಮನೆಗಳ ಕದಗಳ ತಟ್ಟಪ್ಪ.
ಶ್ರೀ  ಸಾಮಾನ್ಯರ ಮನಗಳ ಮುಟ್ಟಪ್ಪ.

ಹೊಸ ವರ್ಷ
ಡಿಸೆಂಬರ್ ೩೧ ರಂದೇ
ಕುಣಿದು ಕುಪ್ಪಳಿಸುವಿರಿ ಏಕೆ?
ಮುಂಬರುವ ಯುಗಾದಿಯನು
ಮರೆಯುವಿರಿ ಏಕೆ?
ವಿದೇಶಿಯರು ಇದ ಕಂಡು ಹಾಕುವರು ಕೇಕೆ!
ಇಂದಲ್ಲ, ನಾಳೆ, ನಮ್ಮ ಮಕ್ಕಳೇ
ಜರಿದಾರು ಜೋಕೆ!

ಎಲ್ ಚಿಕ್ಕಲಿಂಗೇಗೌಡ **9845049090**

ಹಾರೈಕೆ

ಮಳೆ ಇರಲಿ
ಚಳಿ ಬರಲಿ
ಇಳೆ ತುಂಬ
ಉರಿಯುವ ಬಿಸಿಲಿರಲಿ।
ಕ್ಷಾಮ -ಡಾಮರದ
ರುದ್ರ ನರ್ತನವಿರಲಿ!
ಏನೇ ಇರಲಿ
ಏನೂ ಇರದಿರಲಿ!
ಧರೆಯಲಿ
ಬಾರದಿರಲಿ
ಎಂದೂ
ಬರಗಾಲ
ಪ್ರೀತಿ -ಪ್ರೇಮಕ್ಕೆ!
ಜಾತಿ- ಮತ
ಪಂಥಗಳ ಮೀರಿ
ನಿಂತ
ಮನುಜ ಸಂಬಂಧಕ್ಕೆ !
ಅಂತರಂಗದ
ದಿವ್ಯ
ಸ್ನೇಹ ಬಂಧಕ್ಕೆ !

ಚುಟುಕು

ದುಡ್ಡಿಗಿಂತಲು ದೊಡ್ಡ ದೇಹದಾರೋಗ್ಯ
ದುಡ್ಡಿನಿಂದಲೆ ಬರದು ಈ ಪರಮ ಭಾಗ್ಯ
ದಡ್ಡನಾದರು ಸುಖಿಯು ಇರಲು ಆರೋಗ್ಯ
ಜಡ್ಡಿರಲು ವ್ಯರ್ಥ ಸಕಲ ಸೌಭಾಗ್ಯ!

ಆದರಾಗದು ಬರೀ ಗೃಹಸ್ಥ !
ಮೊದಲಾಗು ಹೆಂಡತಿಗೆ ನಂಬಿಗಸ್ಥ!
ಬದಲಾಗಿದೆ ಇಂದು ವ್ಯವಸ್ಥ!
ಇದ ತಿಳಿಯೆ ಮನೆ ಸುವ್ಯವಸ್ಥ!

ಮನೆಯಲಿರೆ ಸದಾ ನಗೆಯ ಟಾನಿಕ್ಕು!
ಮನ ಹೆದರದು ಎಂಥಾ ಕಷ್ಟಕ್ಕು!
ನಗೆ ಔಷದವು ಎಲ್ಲಾ ರೋಗಕ್ಕು!
ಹಗೆ ವಿಷವು ಸಕಲ ಭೋಗಕ್ಕು!

ನಗ್ನ ಸತ್ಯ

ಬಚ್ಚಿಡುವ
ಮುಚ್ಚಿಡುವ

ಕಾಣಿಸದ
ಕಾಲವೊಂದಿತ್ತು!
ಮರೆಮಾಚುವ
ಆ ಕಾಲ
ಮರೆಯಾಗಿ
ತೆರೆದಿಡುವ
ಈ ಕಾಲ
ಕಾಲಿಟ್ಟು
ಹಳೆಕಾಲ
ಬದಿಗಿಟ್ಟು
ಬಹಳೇ
ದಿನವಾಗಿತ್ತು!
ನಾಚುತ್ತಿದ್ದರು
ಈ ಹಿಂದೆ
ತೋರಿಸಲು
ಕಾಲು ಭಾಗ!
ಹೆಮ್ಮೆಪಡುವರು
ಇಂದು
ತೋರಿಸಲು
ತಮ್ಮ
ಪೂರ್ಣ ಭಾಗ!
ತೆರೆ -ಮರೆ
ಮರೆಯಾಗಿ

ಅರೆ -ಬರೆ
ಹೊರೆ-ಹೊರೆಯಾಗಿ
ಮರುಕಳಿಸುತಿದೆ
ದಿಗಂಬರ
ಪರಂಪರೆ!
ನಗ್ನ ಸಹಜವು !
ನಿರಂತರ!

## ಶುಭಕಾಮನೆ

ಗಾಲಿ ಖುರ್ಚಿಯಲೇ
ಕುಳಿತು
ಕಿಡಕಿಯಿಂದಲೇ
ಕಾಣುತ್ತಿದ್ದೇನೆ
ಕರಿ ರೋಡಿನಲಿ
ವೇಗವಾಗಿ
ಓಡುತ್ತಿರುವ
ಕಾರುಗಳ, ದ್ವಿಚಕ್ರ
ತ್ರಿಚಕ್ರ ವಾಹನಗಳ,
ಸರಕಾರಿ ಬಸ್ಸುಗಳ,
ಟ್ರ್ಯಾಕ್ಟರು-ಲಾರಿಗಳ,
ಅಪರೂಪಕ್ಕೆ

ಸೈಕಲ್ಲು -ಎತ್ತಿನ ಗಾಡಿಗಳ!
ಎಲ್ಲರಿಗೂ
ಧಾವಂತ!
ಓಟವೇ ಗುರಿ!
ಯಾವ ಗುರಿಗಾಗಿ
ಈ ತೆರನ
ಓಟ !
ಗಾಬರಿಯು ನನಗೆ !
ಈ ಓಟ !
ಅಪಘಾತದಲಿ
ಕಾಲು ಕಳೆದುಕೊಂಡ
ನತದೃಷ್ಟ ನಾನು !
ಖಾಲಿ ಖುರ್ಚಿಯಲಿ
ಕುಳಿತು
ಹಾರೈಸುವೆನು ನಿತ್ಯ !
ಗೋರಿಯೆಡೆ ಸಾಗದೆ
ತಮ್ಮ- ತಮ್ಮ
ಗೃಹ ಮುಟ್ಟಲಿ ಎಲ್ಲರೂ
ಸರಿಯಾಗಿ!

ಜಿ ವಿ ಹೆಗಡೆ ದುಗ್ಗೂರು **94484233819**

## ಅಜ್ಜಿಯರು

ಹೋದರೆಲ್ಲಿಗೆ ನಮ್ಮಜ್ಜಿಯರೆಲ್ಲ
ಈಗಂತೂ ಎಲ್ಲೂ ಕಾಣುವುದೇ ಇಲ್ಲ

ರಜೆಗೆ ಬಂದವರ ಕೈಹಿಡಿದು
ಬೆನ್ನುಜ್ಜಿ ಮೀಯಿಸುವುದ ಬಿಟ್ಟು
ಗಾದೆ ಮಾತುಗಳಿಂದ ಸೆಳೆದು
ಕುಳಿತಲ್ಲೇ ಕತೆ ಕಟ್ಟುವುದು ಬಿಟ್ಟು

ತೋಟಗದ್ದೆಗಳಲ್ಲಿ ಹೊಸ ಗಿಡಗಳ ತೋರಿಸಿ
ಬೇಲಿ ಮೇಗಳ ದುಂಡು ಮಲ್ಲಿಗೆ ತಂದು
ಅಲ್ಲೇ ನಾರಿನಲಿ ಕಟ್ಟಿ ಮುಡಿಸಿ
ಲಟಿಕೆ ಮುರಿಯುತ್ತಿದ್ದ ಆ ಅಜ್ಜಿಯರು.

ಮುದ್ದೆ ಮುರಿಯುವುದ ಕಲಿಸಿ
ಮೆಂತೆ ಹುಳಿಯಲ್ಲದ್ದಿ ತಿನಿಸಿ,
ನಿದ್ದೆ ನೋಡಿ ಖುಷಿ ಪಟ್ಟವರು
ಶುದ್ಧ ಅಂತಃಕರಣದ ಮುದ್ದು ಅಜ್ಜಿಯರು

ರೊಟ್ಟಿ ತಟ್ಟಿ ಹಿಂಡಿ ಹುಟ್ಟುವುದ ಕಲಿಸಿ
ತಾಜಾ ಹಸಿ ನೊರೆ ಹಾಲು ಕುಡಿಸಿ
ಕೆನೆ ಮೊಸರನ್ನ ಕಲೆಸಿ
ಬೈದು ರಮಿಸಿ ಉಣಿಸುವ ಅಜ್ಜಿಯರು.

ಅವರು ಹೋಗಿದ್ದಲ್ಲ
ಬಿಟ್ಟು ಬಂದಿದ್ದು ನಾವು
ನಗರದಾಕರ್ಷಣೆಗೆ ಕೆಲಸದಾಸೆಗೆ
ಜನಸಂದಣಿಯಲಿ ಸಂಚಾರ ದಟ್ಟಣೆಯಲಿ
ಕಳೆದುಕೊಂಡಿದ್ದು ನಾವು

ಸಿಕ್ಕಾರೇನು ಹೋದರೆ ಹಳ್ಳಿಗೆ
ಅವರೂ ಮೊಬೈಲಲಿ ಮುಳುಗಿ
ಜಾಲತಾಣಕ್ಕೆ ಸಿಲುಕಿ
ಕಾಣೆಯಾಗಿರಲಿಕ್ಕಿಲ್ಲ ತಾನೇ?

ನಿಂಗಮ್ಮ ಭಾವಿಕಟ್ಟಿ ಹುನಗುಂದ **9343736260**

## ದುಂದು ವೆಚ್ಚ

ದುಂದು ವೆಚ್ಚ
ಮಾಡಬೇಡಿ
ಎಂದು ಮಡದಿ ನುಡಿದಳು
ಗಂಟೆಗೊಮ್ಮೆ
ಕಾಫಿ ಬೆರಸಿ
ಒಬ್ಬಳೇ ಕುಡಿದಳು.

## ಬಾಳು ನಂದನ

ಬೆಟ್ಟದಷ್ಟು ಕಷ್ಟಗಳನ್ನು
ನುಂಗಿ ನೀರು ಕುಡಿಯಬಹುದು
ಇಷ್ಟಪಡುವ ಮಡದಿಯೊಡನೆ
ಬಾಳು ನಂದನ.

## ಪೊರಕೆ ಹಿಡಿವ ಕಾಯಂ ಕೆಲಸ !

ಪದವಿ ಪಡೆದು
ಬಂದಮೇಲೆ
ಪೊರಕೆ ಹಿಡಿವ
ಕೆಲಸಕ್ಕಾಗಿ ಕ್ಯೂ ನಿಂತೆ !

ಅದು ಕನಸಾಯಿತು.
ಮದುವೆಯಾದೆ
ಪೊರಕೆ ಕೈ ಹಿಡಿಯಿತು
ಶಾಶ್ವತ ಕೆಲಸ ಸಿಕ್ಕಿತು !!

ಹರುಷದಿಂದ ಬಂದ ಮಳೆರಾಯ

ಮಳೆಯು ಸುರಿಯಿತು
ಹೊಳೆಯು ಹರಿಯಿತು
ಇಳೆಗೆ ಕಳೆಯ ಕಟ್ಟಿತು !

ಪ್ರಾಣಿ, ಪಕ್ಷಿಗೂ
ಹರುಷ ತಂದಿತು
ಬಿಸಿಲು ಕಾಲು ಕಿತ್ತಿತು !

ಕಾಡು ಕಡಿದ
ನಮ್ಮ ಕುಲಕೆ
ಧಗೆಯು ಪಾಠ ಕಲಿಸಿತು !

ಗಿಡವ ನೆಡದೆ
ಕಡಿದ ತಪ್ಪಿನ
ಅರಿವು ನಮಗೆ ಬಂದಿತು!

ನಮ್ಮ ಶೋಕಿಗೆ
ಬಲಿಯು ಆಯಿತು
ಗುಡ್ಡ, ಕಣಿವೆ ಆಯಿತು !

ಕುಡಿವ ನೀರಿನ
ಬವಣೆ ನೀಗಿತು
ಮಳೆಯು ಬಂದೇ ಬಿಟ್ಟಿತು !
ನಮಗೆ ಹರುಷ ತಂದಿತು !

## ಬಂಜೆತನ

ಟೈಟ್ ಪ್ಯಾಂಟು
ಬಂಜೆತನಕ್ಕೆ ಕಾರಣ !
ಟೈಟಾದಾಗ ಮೋರಿಯೆ
ರೆಸ್ಟ್ ರೂಮು ಅಣ್ಣ!

## ಗಂಡಾಂತರ

ಗಂಡ, ಹೆಂಡತಿ
ನಡುವೆ
ಅಂತರವೇ
ಗಂಡಾಂತರ  !!!!!

## ಸ್ವಚ್ಛತೆ

ಬಾಯಿ ಸ್ವಚ್ಛಗಿದ್ದರೆ
ಕಾಯಿಲೆ ದೂರ
ನಾಲಿಗೆ ಸ್ವಚ್ಛಗಿದ್ದರೆ
ಸ್ನೇಯಿತರು ಹತ್ತಿರ

## ರಾಮ ನಿನ್ನ ನಾಮದಲ್ಲಿ......

ರಾಮ ನಿನ್ನ ನಾಮದಲ್ಲಿ
ಎಲ್ಲಾ ಶಕ್ತಿ ಅಡಗಿದೆ.
ನಿತ್ಯ ನಿನ್ನ ಸ್ಮರಣೆಯಿಂದ
ನನ್ನ ಬವಣೆ ನೀಗಿದೆ.
ನಿನ್ನ ಹೊರತು ಬಂಧುವಿಲ್ಲ
ನೀನು ದಿಕ್ಕು ತೋರಿದೆ.
ಕಷ್ಟದಲ್ಲೂ ಕೈಯ ಹಿಡಿದು
ನನ್ನ ಪಾರು ಮಾಡಿದೆ.
ನಿನ್ನ ನಿತ್ಯ ಜಪಿಸುವಲ್ಲಿ
ಮನಕೆ ಹುರುಪು ಬಂದಿದೆ.
ಮನೆಗೆ ಬಂದು ಮನದಿ ನಿಂದು
ಮನೆಯ ಸ್ವರ್ಗ ಮಾಡಿದೆ.
ರಾಮ ನಿನ್ನ ನಾಮದಿಂದ
ಬದುಕು ಸ್ವರ್ಗ ಆಗಿದೆ.

ರಾಮ ನಿನ್ನ ನಾಮದಲ್ಲಿ
ಎಲ್ಲಾ ಶಕ್ತಿ ಅಡಗಿದೆ.

ಸಂತೋಷ ಠುಸ್ ಆಯ್ತು

ಗೆಸ್ಟ್ ಆದ ಆನಂದ
ಮನಸು ಅರಳಿತು
ಕಾರಿನಲ್ಲಿ ಬಂದರು
ಕರೆದುಕೊಂಡು ಹೋದರು
ಕಾರಲ್ಲಿ ತಂದು ಬಿಟ್ಟರು
ಮನೆಯಲ್ಲಿ ಅಕ್ಕಿ
ಬೇಳೆ ಇಲ್ಲಾ
ಮಡದಿ
ಗೊಣಗುತ್ತ ಊಟ
ಬಡಿಸಿದಳು
ರಾತ್ರಿಯ ತಂಗಳು!
ಹಣೆ ಬರಹ
ಅಂದು ಕೊಂಡು
ನೊಂದಳು !
ಹೆತ್ತವರ ಬೈದಳು !

## ಮಾರ್ಕು

ಓದಿನಲ್ಲಿ ನೂರರಲ್ಲಿ
ನೂರು ಮಾರ್ಕು
ಬದುಕಿನಲ್ಲಿ ಬಡ್ಡಿ
ಸಾಲ ರಿಮಾರ್ಕು

## ಒಂದೇ ಸಾಕು!

ಒಂದೇ ಮಗು ಸಾಕು
ಅಂದುಕೊಂಡೆವು !
ಈಗ ಮಗನಿಗೆ
ವಧು ಹುಡುಕಾಟಕ್ಕೆ
ಸರ್ಕಾರಕ್ಕೆ
ಮನವಿ ಸಲ್ಲಿಸಿದ್ದೇವೆ !
ಟೋಕನ್ ಪಡೆದು
ಕ್ಯೂನಲ್ಲಿದ್ದೇವೆ !

**ನಾಲಿಗೆ ಮಹಿಮೆ!**

ಹೆತ್ತವರ
ಒಡಹುಟ್ಟಿದವರ
ಹೆಂಡತಿ ಮಕ್ಕಳ
ಬಂಧು ಬಳಗದವರ
ಸ್ನೇಹಿತರ
ಒಂದು ಗೂಡಿಸಬಲ್ಲದು
ಸ್ವಚ್ಛ ನಮ್ಮ ನಾಲಿಗೆ !
ತೆಗಳಿ ತೆಗಳಿ
ಬಚ್ಚಲಾಗುವುದು ನಾಲಿಗೆ !
ಹಣ, ಅಧಿಕಾರ, ಐಶ್ವರ್ಯ
ದರ್ಪ ಅಹಂಕಾರ
ಬದುಕ ಮುಗಿಸಬಲ್ಲದು
ನಮ್ಮ ನಾಲಿಗೆ !
ಸದಾ ಸ್ವಚ್ಛವಾಗಿರಲಿ
ನಮ್ಮೆಲ್ಲರ ನಾಲಿಗೆ !

ಪ್ರೀತಿ
ದ್ವೇಷ ಬಾಯ
ಬಚ್ಚಲು ಮಾಡಿತು
ಪ್ರೀತಿ ಮನಸ
ಸ್ವಚ್ಛಗೊಳಿಸಿತು

ಜಿ. ಪ್ರಭಾಕರ ಗಂಗೊಳ್ಳಿ **9880583362**

## ದೇಶಾಭಿಮಾನ

ಭಾರತಾಂಬೆಯ ಕರುಳಕುಡಿಗಳೆಲ್ಲರಲಿ
ಕಾರುಣ್ಯದ ಬೆಳಕು ಚಿಮ್ಮಲಿ
ಜಡತೆಯ ಮೌಢ್ಯವ ತೊರೆದು ಏಳಿ
ದೇಶಕ್ಕಾಗಿ ಹೋರಾಡಲು ಎದ್ದೇಳಿ
ನಿಮ್ಮ ಬಲವಿರುವ ತನಕ ದೇಶಸೇವೆ ಇರಲಿ//

ಅದೋ ನೋಡಿ ಮಿಂಚುತಿದೆ ಸೈನಿಕರ ದಾಳಿ
ಆಕ್ರಮಣ ಗೈದ ಗಡಿಯ ರಕ್ಷಣೆ ಮಾಡಿರಿ
ದುರುಳರ ಸದೆ ಬಡಿದ ವೀರಯೋಧರ ನೆನಪಿಸಿ ಮನದಲಿ
ನಮಿಸಿರಿ ಹುತಾತ್ಮರಿಗೆ ಇಂದು ನಿಮ್ಮ ನಮನ ದೇಶದಲ್ಲಿ//

ನಾಡಿನಲ್ಲಿ ಎಚ್ಚರವಾಗಿ ಧ್ವಜ ವಂದನೆ ಮಾಡಿರಿ
ಬಲಿದಾನ ಗೈದವರ ಸಾಧಕರ ದೇಶಾಭಿಮಾನ ಪುಟಿದೇಳಲಿ
ಒಗ್ಗಟ್ಟಿನ ಕೇಸರಿಯ ಪತಾಕೆ ಎಲ್ಲೆಡೆ ಮೆರೆಯಲಿ
ನಾವೆಲ್ಲಾ ಒಂದೇ ಎಂಬ ಮಂತ್ರದ ಜಯಭೇರಿ ಮೊಳಗಲಿ//

ಸ್ವಾತಂತ್ರ್ಯ ಯೋಧರಿಗೆ ಜೈ ಎನ್ನಿರಿ
ಎಲ್ಲರ ಹೃದಯದಲ್ಲಿ ಝೇಂಕಾರ ಪುಟಿದೇಳಲಿ
ಭಾರತದ ಕವಿ ಸಾಹಿತಿ, ಕರುನಾಡ ಕಲಿಗಳೇ ಧ್ವಜ ವಂದನೆ ಮಾಡಿರಿ
ಗಾಂಧಿ, ತಿಲಕ, ಭಗತ್ ಸಿಂಗರ ಹೆಸರು ಕೂಗಿರಿ//

## ಪ್ರಕೃತಿ ಉಳಿಸು

ಪ್ರಕೃತಿಯ ಕೊಡುಗೆಯು ಉಳಿಯಲಿ
ಮನುಜನ ಅಟ್ಟಹಾಸಕ್ಕೆ ಮಿತಿ ಇರಲಿ
ಪರಿಸರವು ಎಂದೂ ನಶಿಸದಿರಲಿ
ಮಾನವೀಯತೆಯು ಜಗದಲಿ ಮೆರೆಯಲಿ//

ಬೆಟ್ಟಗುಡ್ಡಗಳು ಹಸಿರು ಸೊಬಗಿನ ಉಡುಪು ಧರಿಸಲಿ
ಪ್ರಾಣಿ ಪಕ್ಷಿಗಳ ಝೇಂಕಾರ ಮೊಳಗಲಿ
ಹಸಿರು ಬನದಲ್ಲಿ ಹೂ ಹಣ್ಣುಗಳು ಕಂಗೊಳಿಸಲಿ
ಗಿಡಮರಗಳ ನೆರಳು ಎಲ್ಲೆಡೆ ಚೆಮ್ಮಲಿ//

ಹೊಲದಲ್ಲಿ  ಭತ್ತವು ಬೆಳೆಯಲಿ
ರೈತನ ಬಾಳು ಬಂಗಾರವಾಗಲಿ
ವನಮಹೋತ್ಸವದ  ಸಂಭ್ರಮದ ದಿನವಾಗಲಿ
ಮಾನವನು ನಿಸರ್ಗದ ಆರಾಧಕನಾಗಲಿ//

ಬದುಕೇ ಹಸಿರಾಗಿ ಪ್ರೀತಿ ಬೆಳಗಲಿ
ಆಮ್ಲಜನಕದ  ರಕ್ಷಣೆಯು ನಿಮ್ಮದಾಗಲಿ
ಹಸಿರೇ ಉಸಿರು ನಿಮಗಾಗಲಿ
ಅದೇ ಬಾಳಿಗೆ ಎಂದೂ ಬೆಳಕಾಗಲಿ //

ಕನ್ನಡ ರಥಯಾತ್ರೆ

ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ ಕನ್ನಡ ರಥಯಾತ್ರೆ ಇಂದು/
ಎಲ್ಲರೂ ಸಹಕರಿಸಿ ಮೆರವಣಿಗೆಗೆ ಬಂದು/
87 ನೇ ಅಖಿಲ ಭಾರತ ಸಾಹಿತ್ಯ ಸಮ್ಮೇಳನವು ಇದು/
ರಾಜ್ಯಾದ್ಯಂತ ಸಂಚರಿಸಲಿದೆ ಘೋಷಣೆ ಮೊಳಗಿಸುತ್ತಿದೆ ಇಂದು//

ನಾಡದೇವಿಯ ದೇಗುಲದಲ್ಲಿ ಇದರ ಉಧ್ಘಾಟನೆಯು/
ಉತ್ತರ ಕನ್ನಡ ಜಿಲ್ಲೆಯ ಸಿದ್ದಾಪುರದ ಭುವನಗಿರಿಯಲ್ಲಿ ಇದರ ಚಾಲನೆಯು/
ಹೊನ್ನಾವರದಿಂದ ಕುಮಟಾದವರೆಗೂ ವಿಜೃಂಭಣೆಯ ದಿನವು/
ಕನ್ನಡದ ಪ್ರಿಯರೇ ಬಂದು ಭಾಗವಹಿಸಿ  ನೀವು//

ಕನ್ನಡದ ಕವಿ ಸಾಹಿತಿಗಳೇ ಉಳಿಸಿರಿ ಕನ್ನಡವನು/

ಕನ್ನಡದ ಅಭಿಮಾನವನು ಮೂಡಿಸಿರಿ ನೀವು/
ಕನ್ನಡ ಭಾಷೆಯನು ಉಳಿಸುತಲಿ ಇಂದು /
ಕನ್ನಡ ಮಾತೆಗೆ ಮಾಡಿರಿ ಜಯ ಘೋಷ ಎಂದೆಂದೂ//

ಹೆಣ್ಣು

ಹೆಣ್ಣು ಜಗದ ಒಂದು ಕಣ್ಣಾಗಿಹಳು
ಇವಳೇ ದೇವತೆಯಾಗಿ ಮೆರೆದಿಹಳು
ಆದರೂ ಏತಕೇ ಈ ಹೆಣ್ಣಿಗೆ ಶೋಷಣೆ
ಇದಕ್ಕೆ ನೀವೇ ಕಾರಣವಾಗಿರಬಹುದೆಂದು ಈ ಆಲೋಚನೆ
ಇದರ ವಿರುದ್ಧ ಹೋರಾಡದಿದ್ದರೆ ನಿಮಗೂ ಯಾತನೆ
ಯಾಕೆ ಹೀಗಾಗಿದೆ ಈ ಸಮಾಜದ ಕೀಳು ಭಾವನೆ???.

ಒಂಟಿತನ

ನೀನಿಲ್ಲದ ಹೊತ್ತು ನಾನು ಹೇಗೆ ಇರಲಿ?
ಈ ಪ್ರೀತಿಯ ಮರೆತು ಬಾಳುವುದು ಹೇಗೆ ಹೇಳು?
ನೂರಾರು ತರಹ ವಿರಹದ ಬೇಗೆಯನು ಸಹಿಸುತಲಿ
ಮನವೀಗ ನಿನ್ನನ್ನು ಅರಸಿದೆ ಏನು ಮಾಡಲಿ ಹೇಳು?//

ಇನಿಯನ ಬಿಸಿ ಉಸಿರ ಬೆಚ್ಚನೆಯ ಎದೆ ಬಯಸಿದೆ
ನೀ ಕರುಣೆಯಲಿ ಒಲಿದು ಮುತ್ತಿನಮಳೆ ಸುರಿಸು
ಕಾಮನಬಿಲ್ಲಿನಂತೇ ಬಣ್ಣಬಣ್ಣದ ಕನಸಿನ ಜೋಕಾಲಿ ಸೃಷ್ಟಿಸಿದೆ
ಜೋಡಿಹಕ್ಕಿಯಂತೇ ಆಕಾಶದಲ್ಲಿ ನನ್ನ ಮನ ತೇಲಾಡಿಸು//

ತಂಗಾಳಿಯ ತಂಪುಗಾಳಿ ಎಲ್ಲೆಡೆ ಬೀಸುತಿದೆ
ಮೈಮನವು ನಿನ್ನ ಬಾಹುಬಂಧನ ಬಯಸಿದೆ ಇನಿಯಾ
ಕಣ್ಣಂಚಿನ ಸವಿ ಮಾತುಗಳು ನೆನಪಾಗಿ  ನೋಯಿಸುತ್ತಿದೆ
ಮಿಡುಕಾಟ, ಹುಡುಕಾಟ, ಹೃದಯ ವೇದನೆಯ ತೊಳಲಾಟ ಇನಿಯಾ//

ಒಂಟಿತನ ದೂರವಿಟ್ಟು ತವಕದಿ ಬಿಸಿ ಅಪ್ಪುಗೆಗೆ ಕಾದಿದೆ
ನೀ ಬರದಿರೆ ಮನಸ್ಸು ಹುಡುಕುತಿದೆ ನಿನ್ನಾ
ಸರ್ವಸ್ವವೇ ನೀನೆಂದು ಮನವು ನಿನ್ನೇ ಹೊಗಳಿದೆ
ನೀ ಬರುವ ದಾರಿಯ ಕಾದಿರುವೆ ಓ ನನ್ನ ಚಿನ್ನಾ//

ಶುಭಾ ವಿಷ್ಣು ಸಭಾಹಿತ **8197203991**

## ಸೌದೆ ತೀರಿದ ಮೇಲೆ

ಸೌದೆ ತೀರುವುದೆಂದರೆ ಋಣ ಮುಗಿದಂತೆ
ಖಾಲಿಯಾಗಲೆ ಬೇಕು ಹಾದಿ.
ಸೌದೆ ತೀರಿದ ಮೇಲೆ ಉಳಿಯಲೇನಿದೆ?
ಹಾರಿ ಹೋಗುವ ಬೂದಿ.

ಹಸಿ-ಬಿಸಿ ಜೀವ ಒಂದಾದ ಹಂಗಿನಲೆ
ಉಸಿರು ಪಡೆದ ಜೀವ ಮುಂದಾಗಿ
ಕಣ್ಮುಚ್ಚಿಸಿ ದೇಹವೇಕೆಂದು ರೋಧಿಸಿದಂತೆ
ಚಿತೆಗೆ ಹಾತೊರೆದಂತೆ ಹಿಂದಾಗಿ

ಸೌದೆ ತೀರಿದ ಮೇಲೆ ಇನ್ನೇನಿದೆ
ಹುಡುಕಬೇಕು ಎಲಬು ಚೂರು
ಮರೆತುಹೋಗುವುದು  ಮೂರೆ ದಿನಕೆ
ಹಾರಾಡಿ ಮೆರೆದಿದ್ದು ಬಲು ಜೋರು.

ಜೀವದಿಂದ ಜೀವನ ಮರಣದಿಂದ ದಹನ
ಇಷ್ಟ-ಕಷ್ಟ ನಷ್ಟ ಸ್ಪಷ್ಟ ಇತಿವೃತ್ತ!
ಸೌದೆ ತೀರಿದ ಮೇಲೆ ಬೂದಿ ಹಾರಲೆಬೇಕು
ಇದಿಷ್ಟೆ ಎನ್ನುವುದೆ ಜೀವನ ಸತ್ಯ!

## ರೈತನಾಗುವುದೆಂದರೆ ಸುಲಭಲ್ಲ!

ರೈತನಾಗುವುದೆಂದರೆ ಸುಲಭಲ್ಲ!

ಮುಂಗಾರಿನ ಗಾಳಿ ಬೀಸಿದಾಗ
ಆಕಾಶ ನೋಡಿ ನಕ್ಷತ್ರದ ಲೆಕ್ಕಕ್ಕೆ ಮಳೆ ಅಂದಾಜಿಸಬೇಕು
ಸೋರುತ್ತಿರುವ ಸವಲತ್ತುಗಳನು
ಬೊಗಸೆಯಲ್ಲಿ  ಮಳೆ ಹಿಡಿದಂತೆ
ಭರವಸೆಗಳ ಅಧಿಕಮಾಸದಿ ಮಳೆಗಾಲದ ಬರಗಾಲಕ್ಕೆ
ನೇಗಿಲನೆತ್ತಿ ಅಣಿಯಾಗಬೇಕು

ಭೂಮಿ ಹರಗುವುದೆಂದರೆ ಸುಮ್ಮನಲ್ಲ

ಮೊದಲ ಮಳೆಗೆ ಮೆದುವಾದ ಮಣ್ಣು
ಹದವಾಗಿ ನೇಗಿಲ ಕೈಗಳಿಗೆ ಸಿಕ್ಕು
ಹೊಸ ಮಣ್ಣು ಮಳೆಹುಳಗಳೊಂದಿಗೆ ಹೊರಬರಬೇಕು.
ಮತ್ತೆ ಮಳೆ ಲಕ್ಷಣಕ್ಕೆ ಕಾಯಬೇಕು. ಮಳೆಯಾಗಲೇಬೇಕು.

ಬೀಜ ಬಿತ್ತುವುದೆಂದರೆ ಸುಮ್ಮನಲ್ಲ!

ಹರಗಿದ ಭೂಮಿಗೆ ’ಮಡಿ’ ಸಮೇತ

ಉಡಿಯಲ್ಲಿ ತುಂಬಿದ ಬೀಜ ಬಿತ್ತುತ್ತಲೆ
ಹುಳ-ಹುಪ್ಪಡಿಗಳ ಕಾಟದಿಂದ ಕಾಪಾಡುತ್ತಲೆ
ಮತ್ತೆ ಮಳೆಗೆ ಕಾಯಬೇಕು.

ಬೆಳೆ ಕಾಯುವುದೆಂದರೆ ಸುಮ್ಮನಲ್ಲ!

ಅತಿವೃಷ್ಟಿ, ಅನಾವೃಷ್ಟಿ, ಕಳ್ಳ-ಕಾಕರು
ಔಷಧವಾಗದ ಔಷಧ, ರೋಗ –ರುಜಿನಗಳು,
ಯಾವ ಔಷಧವೆ ಇರದ ಹೊಟ್ಟೆಕಿಚ್ಚು
ಒಂದೆ ಎರಡೆ  ಲೆಕ್ಕಕ್ಕೆ ಸಿಗದ ಕಾರಣಗಳು

ಬೆಳೆಗೆ ಬೆಲೆ ಸಿಗುವುದೆಂದರೆ ಸುಮ್ಮನಲ್ಲ!

ಮೇಜಿನಿಂದ ಮೇಜಿಗೆ ಓಡಬೇಕು
ದಪ್ಪ ಚರ್ಮಕ್ಕೆ ಚುಚ್ಚುತ್ತಿರಬೇಕು
ದಲ್ಲಾಳಿಗಳು ಹೇಳಿದ್ದಕ್ಕೆ ಹೌದೆನ್ನಬೇಕು.

ಒಟ್ಟಾಗಿ ರೈತನಾಗುವುದೆಂದರೆ ಸುಲಭದ ಮಾತಲ್ಲ.

ಧೀರೇಂದ್ರ ನಾಗರಹಳ್ಳಿ **9845891228**

ಸಿಹಿ ಕಹಿ

ನನ್ನ ಮಿತ್ರ ಹೇಳುತ್ತಾನೆ ಪ್ರೇಮ ಪವಿತ್ರ
ನಂತರ ಬರೆಯುತ್ತಾನೆ ಆಕೆಗೊಂದು ಪತ್ರ
ಬಿಡಿಸಿ ಅದರೊಳಗೊಂದು ಸುಂದರ ಚಿತ್ರ
ಪ್ರೇಯಸಿ ತಿರಸ್ಕರಿಸಿದಾಗ ಹೇಳುತ್ತಾನೆ
ಆ.......ಪ್ರೇಮ ಅಪವಿತ್ರ

ನಗುವು ಗೆಳೆತನಕ್ಕೆ ಚೆಂದ
ಮಗುವು ಮನೆತನಕ್ಕೆ ಚಂದ
ಮದುವೆ ಬಂಧನಕ್ಕೆ ಚಂದ
ಅನುಭವ ಎಲ್ಲಕ್ಕಿಂತ ಚೆಂದ

ಕೆಮ್ಮು ರೋಗಕ್ಕೆ ಮೂಲ
ಹಮ್ಮು ಅವನತಿಗೆ ಮೂಲ
ಕೋಪ ಪಾಪಕ್ಕೆ ಮೂಲ
ನೀವಾಗದಿರಿ ಇದಕ್ಕೆಲ್ಲ ಮೂಲ

ರಾಜಕಾರಣಿ

ಎಷ್ಟು ನೋವುಂಡರೂ, ಕಷ್ಟ ನೂರ್ ಉಂಡರೂ
ಇಷ್ಟಪಡನವನಾತ್ಮಾವಲೋಕನಕ್ಕೆ
ನಷ್ಟಗಳಿಗೆ ಅನ್ಯತ್ರ ಬೊಟ್ಟು ತೋರುವನು, ನಿಜದಲಿ
ಭ್ರಷ್ಟತಾನಾಗಿಹನು ಮರುಳ ಮನುಜ

ಹಗರಣಗಳೆಲ್ಲಾ ಆಗುತ್ತಿರಲು ಬಯಲು
ಅಪರಾಧಿಗಳೆಲ್ಲರೂ ಸೇರುತ್ತಿರುವರು ಜೈಲು
ನನಗಿಂದು ಸಿಕ್ಕೀ ಸಿಗುವುದು ಬೇಲ್ ಎಂದು
ಕಂಬಿ ಇಲ್ಲದೇ ಬಿಡುತ್ತಿರುವರಲ್ಲ ರೈಲು

ರಾಮಣ್ಣ **9686128962**

ಚುಟುಕುಗಳು

ನನ್ನೊಡನೆ
ನೀನಿರುವಾಗಿನ
ಹಿಂದಿನ
ಸುಂದರ ಕ್ಷಣಗಳೇ..!
ಇಂದಿನ
ಮುಂದಿನ ದಿನಗಳ
ಸವಿ ಸವಿ ನೆನಪುಗಳು!!

ಮೂಡ್ ಗೆ
ಮೋಡಕವಿದ
ದಿನಗಳಲಿ
ಮೂಡ್ ಬರಿಸಿ ಭರಿಸಿ
ಸಂಭ್ರಮವ ಲೇಪಿಸಿ
ಕವನಗಳ ಬರೆಸಿದ
ನಿನಗೆ ನಾ ಋಣಿ ಕಣೇ
ಕಾವ್ಯ ಕಣ್ಮಣಿ !

ಹಲೋ!
ಏನೇ ನಿನ್ ಪ್ರಭಾವ
ಎಲ್ಲಾ ಕಡೆ
ನಿಂದೇ ಹವಾ !

ಓ
ಒಲವೇ
ನೀ ನನ್ನ
ಸ್ಫೂರ್ತಿ ವಲಯ!
ನಾವಿರುವ
ಈ
ಜಗವೇ
ಪ್ರೇಮಾಲಯ!!

ಆಡುವನುಡಿ
ಮಡಿಯಾಗಿದೆ
ನೀಳ ಮುಡಿ
ಹಿಡಿಯಾಗಿದೆ
ಸೌಂದರ್ಯ ರಗಡಾಗಿದೆ
ಮಾತು ಮೌನವಾಗಿದೆ
ಒಲವೇ
ಏಕೆ ಹೀಗಾಗಿದೆ?
ಓ
ಒಲವೇ
ನೀ
ನನ್ನ
ಜೀವನೋತ್ಸಾಹ!
ಆಚರಿಸುವ

ಬಾ
ಒಲವಿನ ಸಪ್ತಾಹ !
 ಚಿತ್ತ
ಚಿತ್ತಾಗಿಸಿ
ಸುರಿಯುತ್ತಿರುವ
ಈ 'ಚಿತ್ತ ಮಳೆ 'ಯಲ್ಲಿ
ನಿನ್ನ ನೆನಪನ್ನು ಒಪ್ಪಿಕೊಂಡು
ನಿನ್ನ ರೂಪವನ್ನು ಅಪ್ಪಿಕೊಂಡು
ಬೆಚ್ಚನೆಯ ಸುಖದಲ್ಲಿರುವಾಗ
ಬೆಳಿಗ್ಗೆ ಏಳಾಯಿತು
ಏಳು ಏಳು ಏಳು ಎಂದರೆ
ಎದ್ದೇಳುವುದು ಹೇಗೆ
ಹೇಗೆಂದು ಹೇಳೇ!

 ಆಸೆ
ಆಗಸದಷ್ಟಿದ್ದರೂ
ಅವ ಬರೆದಂತೆ
ಅವರವರ ಬೊಗಸೆಗೆ
ಸಿಕ್ಕಷ್ಟೇ ದಕ್ಕಿದಷ್ಟೇ
ಬದುಕು!

 ಕವಿಯ ಮನಕೆ
ಮುದನೀಡಿ

ಸ್ಫೂರ್ತಿದಾಯಕವಾಗಿದ್ದ
ಗರಿಕೆಯ ಮೇಲಿನ
ಇಬ್ಬನಿಯಂತೆ ಹೊಳೆಯುತ್ತಿದ್ದ
ಚೈತನ್ಯದಾಯಕ ನಗು
ಮಂಜಿನ ತೆರೆಗೆ ಮರೆಯಾಯಿತೇ !

ಮೋಹ
ವ್ಯಾಮೋಹ
ಆಗುತ್ತಿದೆ
ಮಮಕಾರ
'ಖಾರ'ವಾಗುತ್ತಿದೆ
ಉತ್ಸಾಹ
ನಿರುತ್ಸಾಹವಾಗುತ್ತಿದೆ
ಶಿವನೇ
ಏಕೆ ಹೀಗಾಗುತ್ತಿದೆ?

ವಿದ್ಯಾ
ವಾರಿಧಿಯೇ
ನನ್ನರಸನ ಸೊಸೆಯೇ
ಕೈ ಹಿಡಿದು ಬರೆಸೆನ್ನನು
ಬರೆಸುತಾ ನಡೆಸೆನ್ನನು
ಸಾಹಿತ್ಯ
ಸಂಗೀತದಲೇ ಉಳಿಸೆನ್ನನು

ಈ
ಚಳಿಯಲಿ
ನೀ
ಇರಲು
ಜೊತೆಯಲಿ
ಬೇಕು
ಎನಿಸುವುದು
ಏನೇ ನೇ ನೋ!!

ಅಗಲ ಕಂಗಳ ಅರಸಿ ನೀನು
ನಿನ್ನ ಅರಸಿ ಬರುವೆ ನಾನು
ಮಾತು ಬೆಳ್ಳಿ ಮೌನ ಬಂಗಾರ!
ಬಂಗಾರಕಿಂತ ಬೆಳ್ಳಿಯೇ
ನಿನಗೆ ಸಿಂಗಾರ!!

ಎಲ್ಲಿ
ನೋಡಿದರಲ್ಲಿ
ಕಾಣುತ್ತಿವೆ
ಕಾಡುತ್ತಿವೆ
ಆ ನಿನ್ನ ಕಂಗಳು
ಹುಣ್ಣಿಮೆಯ
ಬಾನಲ್ಲಿ ಬೆಳದಿಂಗಳು!

ತುಂಬು
ನಗೆ ಸೂಸುವ
ಆ
ನಿನ್ನ ಸುಂದರ ಲಿಪ್ಸ
ಸದಾ ಲವಲವಿಕೆಯಿಂದಿರಲು
ನೀಡುವಾ ಟಿಪ್ಸ

ಕೆಲವೊಮ್ಮೆ
ಆಪ್ತರ
ಆತ್ಮೀಯರ
ಮೌನ
ಮನಸಿಗೆ
ನಿರುತ್ಸಾಹ
ನೀರಸ ಭಾವನೆ
ಮೂಡಿಸುತ್ತದೆ

ಒಂದು
ಸುಂದರ
ನೆನಪಿನ ಹಿಂದೆ
ಹಲವಾರು
ಕಥೆಗಳಿರುತ್ತವೆ!
ಸ. ಜಗನ್ನಾಥ **9886024855**

ಹನಿ ಚುಟುಕು

ಗೊತ್ತು

ನನಗೆ ಎಲ್ಲಾ ಗೊತ್ತು
ಎನ್ನುವ ಅರೆಬರೆಯ
ಹುಚ್ಚರು
ಪರರ ಟೀಕಿಸುತ್ತಲೇ
ನಾನಾರ್ಥಗಳ ಸೃಷ್ಟಿಸಿ
ಕಿಚ್ಚ ಹಚ್ಚುವರು

ತೊಂದರೆ

ಬೊಂಡ, ಬಜ್ಜಿ, ವಡೆ
ತಿನ್ನಬೇಡ
ಕಿಡ್ನಿಗೆ ತೊಂದರೆ
ಕುಡಿತ, ಗಾಂಜ
ಚಟಕ್ಕೆ ಬೀಳಬ್ಯಾಡ
ಜೀವನಕ್ಕೆ ತೊಂದರೆ

ಕೊರೆತ

ಕನಸಲಿ
ಬಂದವಳು

ನನಸು  ಮಾಡಲಿಲ್ಲ
ಬದುಕಲಿ
ನಿಂದವಳು
ಜೀವನ ಪೂರ್ತಿ  ಕೊರೆದಳಲ್ಲ

ಡಾ. ಎಂ. ಶಿವಸ್ವಾಮಿ  **9513807425**

## ಪುನರಾವರ್ತನೆ

ಆಕಳಿಕೆ, ಬಿಕ್ಕಳಿಕೆಗಳು
ನಿಂತೇ ಹೋಗಿವೆ ಈಗ
ಬರುವುದಾದರೂ ಹೇಗೆ?
ನೀ ನನ್ನ ನೆನೆಯದಿರುವಾಗ

ಏನಾದರಾಗಲಿ  ನನಗೆ
ನೀ ಬೇಕೆಂದವಳು ನೀನೆ
ಎಲ್ಲ ಇದ್ದರೂ ನಿನಗಾಗಿ
ಜೊತೆಗೆ ಬಂದವನು ನಾನೇ

'ಮಿಂಚಿ ಹೋದ ಕಾಲವ ಮತ್ತೆ ತರಬಹುದೇ?'
ಇದೋ ನೋಡಿ ಎಂದೆ,
ನನ್ನನು ಸೇರಿ ಈ ಲೋಕದ ಮಾತ,
ನೀ ಸುಳ್ಳು ಮಾಡಿದೆ

ಅದೇನೋ ಜಂಭ, ಕೊಂಬುಗಳು
ಮೂಡಿದ್ದವು ನನಗೆ
ಕಳೆದುಕೊಂಡು ಕೊರಗಿದ್ದ  ನೀ ಎನ್ನ
ಮರಳಿ ಸೇರಿದುದಕೆ

ಹಳೆಯ ಗೆಳೆಯರಿಗೆ  ಸಾರಿ ಹೇಳಿದ್ದೆ..
ಇದೋ...ನನ್ನವಳು... ಮತ್ತೆ ಸಿಕ್ಕಳು... ಎಂದು

ಅದೆಷ್ಟು ಸಂತಸ ಪಟ್ಟೆ

ಈಗ...
ಈಗ...
ದೂಡಿ ಹೋದೆ
ತಳವಿರದ ಪಾತಾಳಕೆ..
ಮತ್ತದೇ ಗೋಳಾಯ್ತು,
ಒಂದರಿಂದ ಶೂನ್ಯಕೆ ವಾಪಸು ಬಂದಾಯ್ತು

ಹೇಮಂತ ಲಿಂಗಪ್ಪ  **9972064684**

# ಕ.ವಿ.ಪ್ರ.ನಿ.ನಿ., ಲೆಕ್ಕಾಧಿಕಾರಿಗಳ ಸಂಘ, ಆನಂದ ರಾವ್ ವೃತ್ತ

ಬೆಂಗಳೂರು

## ಉಪನ್ಯಾಸ–ಕವಿಗೋಷ್ಠಿ–ಭರತನಾಟ್ಯ

ದಿನಾಂಕ:
11–1–2025,
ಎರಡನೆಯ ಶನಿವಾರ ಬೆಳಗ್ಗೆ 10 ಗಂಟೆಯಿಂದ.

ಸ್ಥಳ :
ಬೆಂಗಳೂರಿನ ಆನಂದ ರಾವ್ ವೃತ್ತದ, ಬಳಿಯಿರುವ
ಕ.ವಿ.ಪ್ರ.ನಿ.ನಿ., ಲೆಕ್ಕಾಧಿಕಾರಿಗಳ ಸಂಘದ ಬೆಳ್ಳಿ ಭವನ

**ಉಪನ್ಯಾಸ :**

**ನಾನೂಂದ್ರೆ ನಂಗಿಷ್ಟ**



**ಡಾ. ಡಿ. ಎಂ. ಹೆಗಡೆ,**
ಕರ್ನಾಟಕ ಉಚ್ಚ ನ್ಯಾಯಾಲಯದ ನ್ಯಾಯವಾದಿಗಳು,
ಸಂಪಾದಕರು, "ವಕೀಲರ ವಾಹಿನಿ"
ಆಪ್ತ ಸಮಾಲೋಚಕರು, ಲೇಖಕರು

**ಸಂಕ್ರಾಂತಿ ಕವಿಗೋಷ್ಠಿ :**
**ಅಧ್ಯಕ್ಷತೆ**



**ಎಂ. ಆರ್. ಕಮಲ**
ಖ್ಯಾತ ಲೇಖಕಿ, ಅನುವಾದಕಿ,
ಬಹು ಭಾಷಾ ತಜ್ಞೆ

ಭಾಗವಹಿಸುವ ಕವಿಗಳು

ಭಾಗವಹಿಸುವ ಕವಿಗಳು















**ಭರತನಾಟ್ಯ ಕಾರ್ಯಕ್ರಮ**
**ಆರಾಧನಾ**

**ವಿದುಷಿ ಶ್ರೀಮತಿ ನವ್ಯಾ ಪ್ರಮೋದ್**
ಹಾಗೂ
ಅವರ ನವ್ಯಾ ನೃತ್ಯಾಂಜಲಿ ಶಾಲೆಯ ಶಿಷ್ಯೆಯರಿಂದ





~~~~~~~~~~~~~~~~~~~~~~~~~~~~~~~~~~~~~~~~
ಎಲ್ಲರಿಗೂ ಆತ್ಮೀಯ ಆಮಂತ್ರಣ. ಬನ್ನಿ, ಸ್ನೇಹಿತರು, ಬಂಧುಗಳಿಗೂ ತಿಳಿಸಿ
~~~~~~~~~~~~~~~~~~~~~~~~~~~~~~~~~~~~~~~~

**ಅಧ್ಯಕ್ಷರು ಹಾಗೂ ಪದಾಧಿಕಾರಿಗಳು**

ಕ.ವಿ.ಪ್ರ.ನಿ.ನಿ.ಲೆಕ್ಕಾಧಿಕಾರಿಗಳ ಸಂಘ, ಬೆಂಗಳೂರು.